# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಸರ್ವಸಾಧಾರಣವಾಗಿ ಮಾನವರಲ್ಲಿ ಸ್ವಾರ್ಥವೇ ಕಾರ್ಯಾಚರಣೆ ಮಾಡಿಸಿಕೊಂಡಿರುತ್ತದೆ. ತನಗೆ, ತನ್ನದು, ಎಂಬುದು ಉತ್ತಮ ಸ್ವಾರ್ಥವಾದರೆ ತಮಗೆ, ತಮ್ಮದು ಎಂಬ ಸ್ವಾರ್ಥವು ಮಧ್ಯಮ ಸ್ವಾರ್ಥ. 'ತನ್ನದು' ಮೇರೆ ಮೀರುವಾಗ ದುರಾಶೆಯೆನಿಸಿ ಅಧಮ ಸ್ವಾರ್ಥವಾಗುತ್ತದೆ. ಇಂತಹ ಸ್ವಾರ್ಥ ಆಕ್ರಮಿಸಿಕೊಂಡರೆ ವಿವೇಕವು ನಶಿಸಿ ತಾರತಮ್ಯ ಜ್ಞಾನ ಕಾಣದೆ ಹೋಗುತ್ತದೆ. ಅದರಿಂದಾಗುವ ದುಷ್ಫಲಿತಗಳಿಗೆ ಉದಾಹರಣ ಸೂಚಕವಾಗಿ ಈ ಸಂಚಿಕೆಯಲ್ಲಿ "ಅಮ್ಮನವರ ನಗ" ಎಂಬ ಕಥೆಯಿದೆ.

## ಅಮರವಾಣಿ

ಧನಂ ಲಬ್ಧಂ ದ್ಯೂತೇನೈವ ದಾರಾ ಮಿತ್ರಂ ದ್ಯೂತೇನೈವ
ದತ್ತಂ ಭುಕ್ತಂ ದ್ಯೂತೇನೈವ ಸರ್ವಂ ನಷ್ಟಂ ದ್ಯೂತೇನೈವ

ದ್ಯೂತದಿಂದ ಹಣಗಳಿಸಬಹುದು, ಅದರಿಂದ ಪತ್ನಿಯೂ, ಮಿತ್ರರೂ ಲಭಿಸುವರು. ಇನ್ನೊಬ್ಬರಿಗೆ ಕೊಡಲಿಕ್ಕೂ, ಅನುಭವಿಸಲಿಕ್ಕೂ ಸಾಧ್ಯವಾಗುತ್ತದೆ. ಸರ್ವನಾಶವೂ ದ್ಯೂತದಿಂದಾಗುತ್ತದೆ.

ಸಂಪುಟ : ೧೭    ಫೆಬ್ರವರಿ '೮೭    ಸಂಚಿಕೆ : ೨

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦



## "ಎವೆಯಿಕ್ಕುವಷ್ಟರಲ್ಲಿ ಬರುವ ಕ್ಯಾಚ್ ಹಿಡಿಯಲು ಪ್ರತಿ ಕ್ಷಣವೂ ಸಿದ್ಧನಾಗಿರಬೇಕಾಗುತ್ತದೆ. ಅದಕ್ಕಾಗಿಯೇ ನಾನು ಮಾಲ್ಟೋವಾ ಕೈಯಿಂದ ಜಾರಬಿಡುತ್ತಿಲ್ಲ!"

—ವಿಖ್ಯಾತ ಫೀಲ್ಡರ್ ಶ್ರೀಕಾಂತ್, ತನ್ನ ಅಪಾರ ಚಾಕಚಕ್ಯತೆಯ ಬಗ್ಗೆ ನೀಡಿದ ಹೇಳಿಕೆ.

ಒಂದು ಮಗ್ ರುಚಿಕರ ಸ್ವಾದದ ಮಾಲ್ಟೋವಾದೊಂದಿಗೆ ನನ್ನ ಮುಂಜಾನೆ ಆರಂಭವಾಗುತ್ತದೆ. ನನ್ನ ಆಕ್ರಮಣದ ಕ್ರಮದಲ್ಲಿ ಮಾಲ್ಟೋವಾಕ್ಕೆ ಮಹತ್ವದ ಸ್ಥಾನ.



ಮಾಲ್ಟ್, ತಾಜಾ ಕೆನೆ ಹಾಲು, ರುಚಿಕರ ಕೋಕೋ ಮತ್ತು ಸಕ್ಕರೆಯ ಸಮ್ಮಿಲಿತ ಉತ್ತಮತೆ ಇರುವ ಒಂದೇ ಒಂದು ಪೇಯ— ಮಾಲ್ಟೋವಾ. ಆಡುತ್ತಿರಲಿ, ಇಲ್ಲದಿರಲಿ... ನನಗೆ ಬೇಕಾದ ಆರೋಗ್ಯ, ಶಕ್ತಿ ಮತ್ತು ಬಲಕ್ಕಾಗಿ ನನಗೆ ಬೇಕು ಮಾಲ್ಟೋವಾ. ದಿನಕ್ಕೆರಡು ಬಾರಿ ಮಾಲ್ಟೋವಾ ಕುಡಿದು, ಬೆಳೆದು ಚಾಂಪಿಯನ್ ಆಗಿರಿ.

ಹೊಸ
**ಮಾಲ್ಟೋವಾ**




## ಆರೋಗ್ಯ, ಬಲ ಮತ್ತು ಶಕ್ತಿಯ ವಿಜಯಿ ಸಂಯೋಜನೆ.

FSA/JIL/1/86-KAN

# ಚಂದಮಾಮನ ಹರಟೆ



## ಕಂಡುಹಿಡಿಯಲ್ಪಟ್ಟ ದೊಡ್ಡ ಹಡಗು !

೧೯೧೨ ನೇ ಸಂವತ್ಸರದ ಏಪ್ರಿಲ್ ೧೫ರಂದು, ಆ ದಿನಗಳ ದೊಡ್ಡ ಹಡಗೆನಿಸಲ್ಪಟ್ಟ 'ಟಿಟಾನಿಕ್' ಸಮುದ್ರ ಜಲದಲ್ಲಿ ಮುಳುಗಿಹೋಯಿತ್ತು. ಆ ಹಡಗಿನಲ್ಲಿದ್ದ ೨೨೨೪ ಮಂದಿ ಪ್ರಯಾಣಿಕರಲ್ಲಿ ೧೫೧೩ ಮಂದಿ ಸಮುದ್ರದ ಪಾಲಾದರು. ಮುಳುಗಿ ಹೋದ ಆ ಹಡಗು, ಉತ್ತರ ಅಟ್ಲಾಂಟಿಕ್ ಸಮುದ್ರದಲ್ಲಿ ಎರಡೂವರೆ ಮೈಲು ಆಳದಲ್ಲಿರುವುದೆಂದು, ಇತ್ತೀಚೆಗೆ ಅಮೆರಿಕಾಕ್ಕೆ ಸೇರಿದ ಒಂದು ನೌಕಾ ಸಂಶೋಧನಾ ಸಂಸ್ಥೆ ಕಂಡುಹಿಡಿದಿದೆ !

## 'ಸಮಂತ' ವಜ್ರ !



ಅಮೆರಿಕಾಕ್ಕೆ ಸೇರಿದ ಸಮಂತಾ ಎಂಬ ವಿದ್ಯಾರ್ಥಿನಿ, ಪ್ರಪಂಚ ಶಾಂತಿಗಾಗಿ ಕೆಲಸ ಮಾಡುವಂತೆ ರಷ್ಯಾ ನಾಯಕರಿಗೆ ಒಂದು ಕಾಗದ ಬರೆದಳು. ಆ ಪುಟಾಣಿಯ ಮನೋಭಾವಕ್ಕೆ ಮುಗ್ಧರಾದ ಆ ನಾಯಕರು ಅವಳನ್ನು ೧೯೮೩ ನೇ ಸಂವತ್ಸರದಲ್ಲಿ ಸೋವಿಯತ್ ರಷ್ಯಾಕ್ಕೆ ಆಹ್ವಾನಿಸಿದರು ಕೂಡಾ. ೧೯೮೫ ನೇ ಸಂವತ್ಸರದಲ್ಲಿ ನಡೆದ ಒಂದು ವಿಮಾನ ಅಪಘಾತದಲ್ಲಿ ಸಮಂತಾ ದುರ್ಮರಣವನ್ನಪ್ಪಿದಳು. ಆ ಹುಡುಗಿಯ ಸ್ಮೃತಿ ಚಿಹ್ನವಾಗಿ ಸೈಬೀರಿಯಾ ಗನಿಗಳಲ್ಲಿ ಲಭಿಸಿದ ಒಂದು ದೊಡ್ಡ ವಜ್ರಕ್ಕೆ 'ಸಮಂತ ವಜ್ರ' ಎಂದು ಹೆಸರಿಟ್ಟರು !



## ನಡೆಯುವ ಪರ್ವತ

ಪಾಕಿಸ್ತಾನಕ್ಕೆ ಸೇರಿದ ಅಲನ್‌ಚನ್ನಾ ಎಂಬ 'ದೊಡ್ಡ ಮನುಷ್ಯ' ಇತ್ತೀಚೆಗೆ ನ್ಯೂಯಾರ್ಕ್ ನಗರದ ದೊಡ್ಡ ಬೀದಿಯಲ್ಲಿ ನಡೆದುಹೋಗುತ್ತ, ಹೋಗುವ ಬರುವವರನ್ನು ಸ್ವಲ್ಪ ಹೊತ್ತು ಸ್ತಂಭಿಸುವಂತೆ ಮಾಡಿದನು. ಎಂಟಡಿ ಮೂರು ಅಂಗುಲಗಳಷ್ಟು ಎತ್ತರದ ಚನ್ನಾ, ಅಲ್ಲಿಯ ಮನುಷ್ಯರ ನಡುವೆ ಒಂದು ಗುಡ್ಡದ ಹಾಗೆ ಕಾಣಿಸಿದನು. ಅವನನ್ನು ನೋಡಿದ ಕೂಡಲೇ ಎಲ್ಲರೂ ಆಶ್ಚರ್ಯದಿಂದ ಅವನ ಸುತ್ತಲೂ ಗುಂಪುಗೂಡಿದರು. ಈ ವಿಚಿತ್ರ ಸಂಘಟನೆಯನ್ನು ಟಿ. ವಿ. ಗಳು ಚಿತ್ರವಾಗಿ ಹಿಡಿದುವು !

# ನಿಮಗೆ ಗೊತ್ತೇ?

೧. ಹಿಂದೂ ಮಹಾ ಸಮುದ್ರದಲ್ಲಿಯ ದ್ವೀಪಗಳಲ್ಲಿ ದೊಡ್ಡದಾದುದು ಯಾವುದೆಂದು ಗೊತ್ತಿದೆಯೆ?

೨. ಮಧ್ಯಧರಾ ಸಮುದ್ರದಲ್ಲಿರುವ ದೊಡ್ಡ ದ್ವೀಪವು ಯಾವುದು ?

೩. ೧೯೬೩ ಸಂವತ್ಸರದಲ್ಲಿ ಅಗ್ನಿ ಪರ್ವತವು ಸ್ಫೋಟಿಸಿದುದರಿಂದ ಖಾಲೀ ಮಾಡಲ್ಪಟ್ಟ ಅಟ್ಲಾಂಟಿಕ್ ಸಮುದ್ರದಲ್ಲಿರುವ ದ್ವೀಪವು ಯಾವುದೆಂದು ನಿಮಗೆ ತಿಳಿದಿದೆಯೆ ?

೪. ಫಿಜೀ ದ್ವೀಪಗಳೆಂದು ಹೇಳಲ್ಪಡುವ ದ್ವೀಪಗಳು ಎಷ್ಟೆಂದು ನೀವು ಅರಿತಿರುವಿರಾ ?

೫. ಫಿಲಿಪೈನ್ಸ್ ರಿಪಬ್ಲಿಕ್‌ನಲ್ಲಿ ಎಷ್ಟು ದ್ವೀಪಗಳಿವೆಯೆಂದು ನಿಮಗೆ ಗೊತ್ತಿದೆಯೆ ?

(ಉತ್ತರ ೬೫ ನೇ ಪುಟದಲ್ಲಿ)

**ಪುರಾಣ ಗಾಥಾವಳಿ :**

# ಅಂಬಾ

ಕಾಶೀ ರಾಜ್ಯವನ್ನು ಪಾಲಿಸಿದ ಹೋತ್ರವಾಹನನಿಗೆ ಅಂಬಾ, ಅಂಬಿಕಾ, ಅಂಬಾಲಿಕಾ ಎಂಬ ಮೂವರು ಕುಮಾರಿಯರಿದ್ದರು. ಅವರಿಗೆ ಪ್ರಾಪ್ತ ವಯಸ್ಸು ಬರುತ್ತಲೇ ರಾಜನು ಸ್ವಯಂವರವನ್ನು ಪ್ರಕಟಿಸಿದನು.

ಭೀಷ್ಮನು ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ವಿವಾಹ ಮಾಡಲು ಸ್ವಯಂವರಕ್ಕೆ ಬಂದ ರಾಜ ಕುಮಾರರೆಲ್ಲರನ್ನೂ ಸೋಲಿಸಿ, ಮೂವರು ರಾಜಕುಮಾರಿಯರನ್ನೂ ಬಲವಂತವಾಗಿ ಹಸ್ತಿನಾಪುರಕ್ಕೆ ತೆಗೆದುಕೊಂಡು ಹೋದನು.

ಅಂಬಾ ತಾನು ಅದಕ್ಕೆ ಮೊದಲೇ ಸಾಳ್ವನನ್ನು ವರಿಸಿರುವೆನೆಂದು ಹೇಳಿದ ಕೂಡಲೇ ಭೀಷ್ಮನು ಹಾಗೆಯೇ ಹೋಗುವಂತೆ ಹೇಳಿ, ಅವಳನ್ನು ಸಾಳ್ವನ ಬಳಿಗೆ ಕಳುಹಿಸಿಕೊಟ್ಟನು. ಆದರೆ ಒಂದುಸಾರಿ ಭೀಷ್ಮನು ಬಲವಂತವಾಗಿ ಅಪಹರಿಸಿದ ಅಂಬೆಯನ್ನು ಮದುವೆಯಾಗಲು ಸಾಳ್ವನು ನಿರಾಕರಿಸಿಬಿಟ್ಟನು.

ಅಂಬಾ ಚಿಂತೆಯಿಂದ ಭೀಷ್ಮನ ಬಳಿಗೆ ತಿರುಗಿ ಬಂದು, ವಿಷಯವನ್ನು ತಿಳಿಸಿ ತನ್ನನ್ನು ವಿವಾಹ ಮಾಡಿಕೊಳ್ಳುವಂತೆ ಕೇಳಿಕೊಂಡಳು. ಭೀಷ್ಮನು ಅದಕ್ಕೆ ಒಪ್ಪಲಿಲ್ಲ. ಕಡೆಗೆ ಭೀಷ್ಮನ ಗುರುವಾದ ಪರಶುರಾಮನು ಆಜ್ಞಾಪಿಸಿದರೂ ಸಹ ಭೀಷ್ಮನು ತನ್ನ ಪ್ರತಿಜ್ಞೆಯನ್ನ ಭಂಗಪಡಿಸಿ ವಿವಾಹವಾಗಲು ಒಪ್ಪಲಿಲ್ಲ.

ತನ್ನ ವಿವಾಹವನ್ನು ಹಾಳು ಮಾಡಿದ ಭೀಷ್ಮನ ಮೇಲೆ ಹಗೆ ತೀರಿಸಿಕೊಳ್ಳಬೇಕೆಂದು ಅಂಬಾ ಶಿವನನ್ನು ಧ್ಯಾನಿಸಿ ಘೋರವಾದ ತಪಸ್ಸು ಮಾಡಿದಳು. ಮರು ಜನ್ಮದಲ್ಲಿ ಅವಳ ಇಷ್ಟವು ನೆರವೇರುವಂತೆ ಶಿವನು ವರ ಕೊಟ್ಟನು.

ಆ ವರಪ್ರಸಾದದಿಂದ ಅಂಬೆ ದ್ರುಪದ ರಾಜನಿಗೆ ಮಗಳಾಗಿ ಹುಟ್ಟಿ ಚಿಕ್ಕಂದಿನಿಂದಲೇ ರಾಜೋಚಿತವಾದ ವಿದ್ಯೆಗಳನ್ನೆಲ್ಲ ಕಲಿತಳು. ಭಾರತ ಯುದ್ಧಕ್ಕೆ ಮೊದಲು-ಯಕ್ಷನನ್ನು ಪ್ರಾರ್ಥಿಸಿ ಪುರುಷ ಲಕ್ಷಣಗಳಿಂದ ಶಿಖಂಡಿಯಾದಳು.

ಕುರುಕ್ಷೇತ್ರದಲ್ಲಿ ನಡೆದ ಭಾರತ ಯುದ್ಧದಲ್ಲಿ ಅರ್ಜುನನು ಭೀಷ್ಮನನ್ನು ಇದಿರಿಸಿದಾಗ, ಅರ್ಜುನನ ರಥದ ಮೇಲೆ ಶಿಖಂಡಿ ಇರುವುದದನ್ನು ನೋಡಿ, ಸ್ತ್ರೀಯ ಮೇಲೆ ಅಸ್ತ್ರ ಪ್ರಯೋಗ ಮಾಡುವುದೇ ? ಎಂದು ಭೀಷ್ಮನು ಅಸ್ತ್ರಸನ್ಯಾಸ ಮಾಡಿದನು. ಅದೇ ಸಂಧಿಯನ್ನು ನೋಡಿ ಅರ್ಜುನನು ಭೀಷ್ಮನನ್ನು ಬೀಳಿಸಿಬಿಟ್ಟನು. ಅಂಬೆಯ ಶಪಥವು ಹೀಗೆ ನೆರವೇರಿತು.





# ಸಿಕ್ಕುಗಂಟು

**ಒಂ**ದು ಊರಿನಲ್ಲಿ ಗಿರಿಬಾಲನೆಂಬವನ ತಂದೆ ರೋಗದಲ್ಲಿ ಬಿದ್ದು ಎರಡು ವರ್ಷಗಳವರೆಗೆ ಒದ್ದಾಡಿ, ಕಡೆಗೆ ಒಂದು ದಿನ ಪ್ರಾಣಬಿಟ್ಟನು. ಅಂದಿನಿಂದ ಯಾರೂ ಕೇಳುವವರಿಲ್ಲದೆ ಗಿರಿಬಾಲನು ಒಬ್ಬನೇ ಆದನು. ತಂದೆಯ ಚಿಕಿತ್ಸೆಯ ಖರ್ಚುಗಳಿಗೆ ತುಂಬಾ ಸಾಲವಾಗಿತ್ತು. ಸಾಲದ ರಗಳೆ ಪರಿಹರಿಸಿಬಿಟ್ಟರೆ ನಿಶ್ಚಿಂತನಾಗಿರಬಹುದೆಂದು ಇದ್ದ ಸ್ವಲ್ಪ ಹೊಲಗದ್ದೆಗಳನ್ನು ಮಾರಿ ಸಾಲ ತೀರಿಸಿಬಿಟ್ಟನು. ಹೀಗೆ ದೊಡ್ಡ ಭಾರ ಕಳೆದುಕೊಂಡ ಮೇಲೆ ಗಿರಿಬಾಲನು ಪಟ್ಟಣಕ್ಕೆ ಹೋಗಿ ಏನಾದರೂ ಉದ್ಯೋಗ ಸಂಪಾದಿಸಿಕೊಳ್ಳೋಣವೆಂದುಕೊಂಡು ಹಳ್ಳಿಯನ್ನು ಬಿಟ್ಟು ಹೊರಟನು.

ದಾರಿಯಲ್ಲಿ ತಗಲಿದ ಒಂದು ಗ್ರಾಮವನ್ನು ದಾಟಿ ಸ್ವಲ್ಪ ದೂರ ಹೋದಾಗ, ಕಾಲುವೆಯ ಬದಿಯಲ್ಲಿ ಒಂದು ಮರದ ಬುಡದಲ್ಲಿ ಕುಳಿತಿದ್ದ ಮುದುಕನೊಬ್ಬನು ಅವನನ್ನು ನೋಡಿ, "ಅಪ್ಪಾ, ನೀನು ಪಟ್ಟಣಕ್ಕೆತಾನೇ ಹೋಗುತ್ತಿ? ನಾನೂ ಅಲ್ಲಿಗೇ ಹೊರಟಿದ್ದೇನೆ. ನಡೆಯಲಾಗದೆ ಬಾಡಿಗೆಯ ಗಾಡಿ ಯಾವುದಾದರೂ ಬರುವುದೇನೋ ಅಂತ ನೋಡುತ್ತಿದ್ದೇನೆ. ನೀನೂ ನನ್ನೊಂದಿಗೆ ಬಂದರೆ ಸ್ವಲ್ಪ ಧೈರ್ಯವಾಗಿರುತ್ತದೆ. ಏಕೆಂದರೆ ನಾನು ಎದೆ ನೋವಿನ ಮನುಷ್ಯನಪ್ಪಾ, ದಯಮಾಡಿ ಸಹಾಯ ಮಾಡು!" ಎಂದನು.

ಗಿರಿಬಾಲನಿಗೆ ಕೂಡಾ ಅಷ್ಟು ದೂರದವರೆಗೆ ನಡೆದುದರಿಂದ ತುಂಬಾ ಬಳಲಿಕೆಯಾಗಿತ್ತು. ಕಾಲುಗಳೂ ಜುಮುಗುಡುತ್ತಿದ್ದುವು. ಬಾಡಿಗೆಯ ಗಾಡಿ ಎಂದುದನ್ನು ಕೇಳಿ ಅವನಿಗೂ ಸ್ವಲ್ಪ ಉತ್ಸಾಹ ಬಂತು. ಈ ಕೆಲಸದಿಂದ ಪಾಪವಂತೂ ಬಾರದು.

ಅವನು ಏನೋ ಉತ್ತರ ಹೇಳುವುದರೊಳಗೆ ಮುದುಕನು, "ಅಪಾರ್ಥ ಮಾಡಿಕೊಳ್ಳಬೇಡಪ್ಪಾ. ಗಾಡಿಯ ಬಾಡಿಗೆ ಪೂರಾ ನನ್ನದೇ. ಈ ನಡುವೆ ಎದೆ ನೋವಿನ ಜತೆ ಬೇರೆ ಗೊಡವೆಗಳೂ ಸೇರಿ ನನ್ನಲ್ಲಿ ಪುಕ್ಕಲುತನ ಹೆಚ್ಚಾಗಿಹೋಯಿತು. ಅದಕ್ಕೇ ನಿನ್ನನ್ನು ಸಹಾಯಕ್ಕಾಗಿ ಕರೆಯುತ್ತೇನೆ. ಅಷ್ಟೇ ಹೊರತು ಮತ್ತೇನಿಲ್ಲ" ಎಂದು ಸ್ಪಷ್ಟವಾಗಿಯೇ ಹೇಳಿದನು.

"ಇಷ್ಟೆಲ್ಲಾ ಹೇಳಬೇಕಾಗಿಲ್ಲ ತಾತಯ್ಯಾ, ಇಬ್ಬರೂ ಕೂಡಿಯೇ ಹೋಗೋಣ. ಅದಕ್ಕೇನಂತೆ"

ಎಂ. ಕೆ. ಈಶ್ವರರಾವ್



ಎಂದು ಮುದುಕನೊಂದಿಗೆ ಅಲ್ಲಿಯೇ ನಿಂತನು ಗಿರಿಬಾಲ. ಸ್ವಲ್ಪ ಹೊತ್ತಿಗೆ ಆ ದಾರಿಯಾಗಿ ಒಂದು ಬಾಡಿಗೆಯ ಗಾಡಿ ಬಂದಿತು. ಮುದುಕನು ಗಾಡಿಯವನೊಂದಿಗೆ ಬಾಡಿಗೆಯ ಸಂಗತಿ ಮಾತಾಡಿ, ಗಿರಿಬಾಲನೊಂದಿಗೆ, "ಇಕೋ, ಈ ಪೆಟ್ಟಿಗೆ ಸ್ವಲ್ಪ ಎತ್ತಿ ಗಾಡಿಯಲ್ಲಿಡಪ್ಪ. ಭಾರ ಎತ್ತಬಾರದೆಂದು ವೈದ್ಯರು ಹೇಳಿದ್ದಾರೆ" ಎಂದನು.

ಆ ಸಮಯದಲ್ಲಿ ಗಾಡಿಯವನು ತುಸು ದೂರದಲ್ಲಿರುವ ಹಸಿ ಹುಲ್ಲನ್ನು ನೋಡಿ, ಎತ್ತುಗಳಿಗಾಗಿ ಅದನ್ನು ಹರಿದು ತರಲು ಹೋದನು.

ಗಾಡಿಯವನು ಹುಲ್ಲಿನೊಂದಿಗೆ ಬಂದ ಕೂಡಲೇ ಗಿರಿಬಾಲನು ಪೆಟ್ಟಿಗೆಯನ್ನು ಗಾಡಿಯಲ್ಲಿಟ್ಟು, ಮುದುಕನಿಗೆ ಕೈಗಳ ಆಧಾರ ಕೊಟ್ಟು ಗಾಡಿಯಲ್ಲಿ ಏರಿಸಿದನು. ಅವನೂ ಏರಿಕೊಂಡನು.

ಗಾಡಿ ಪಟ್ಟಣಕ್ಕೆ ತಲಪುವಾಗ ಹೊತ್ತು ಮುಳುಗಿ ಕತ್ತಲಾಗಲಿಕ್ಕಾಯಿತು. ಅವರ ಗಾಡಿ ಪಟ್ಟಣದ ಪ್ರಧಾನ ಬೀದಿಯಲ್ಲಿ ಹೋಗುವಾಗ, ಇಬ್ಬರು ರಕ್ಷಕಭಟರು ಗಾಡಿಯನ್ನು ನಿಲ್ಲಿಸಿ, "ಎಲ್ಲಿಂದ ಬರುತ್ತಿದ್ದೀರಿ? ನಿಮ್ಮ ಗಾಡಿಯನ್ನು ಶೋಧಿಸಬೇಕು" ಎಂದರು.

ಆ ಮಾತು ಕೇಳಿದ ಕೂಡಲೇ ಮುದುಕನು ತಬ್ಬಿಬ್ಬಾಗಿ "ಅಯ್ಯಾ, ನಾನು ಎದೆ ನೋವಿನ ಮನುಷ್ಯ. ವೈದ್ಯರನ್ನು ನೋಡಲು ಪಟ್ಟಣಕ್ಕೆ ಬಂದಿದ್ದೇನೆ. ಬೇಗನೇ ಹೋಗಬೇಕಾಗಿದೆ. ಅನಾವಶ್ಯಕವಾಗಿ ಹೀಗೆಲ್ಲಾ ತಡೆಯಬೇಡಿರಪ್ಪಾ, ನಿಮ್ಮ ಪುಣ್ಯ" ಎಂದನು.

"ನಿಮ್ಮ ಸಾಮಾನುಗಳೇನೆಂದು ಪರೀಕ್ಷಿಸಿ ನೋಡಿದ ಮೇಲೆ ನಿಶ್ಚಿಂತೆಯಾಗಿ ಹೋಗಬಹುದು. ಅಷ್ಟರೊಳಗೆ ಏನೂ ಆಗಿಬಿಡದು" ಎಂದು ರಕ್ಷಕಭಟರು ಗಾಡಿಯಲ್ಲಿದ್ದ ಪೆಟ್ಟಿಗೆಯನ್ನು ಕೆಳಕ್ಕೆ ಇಳಿಸಿ, ಅದಕ್ಕೆ ಬೀಗ ಹಾಕಿರುವುದನ್ನು ನೋಡಿ ಬೀಗದ ಕೈ ಕೊಡುವಂತೆ ಕೇಳಿದರು.

ಮುದುಕನು ಕೂಡಲೇ, "ಈ ಪೆಟ್ಟಿಗೆ ನನ್ನದಲ್ಲ. ಈ ಹುಡುಗನದು" ಎಂದುದನ್ನು ಕೇಳಿ, ಗಿರಿಬಾಲನು ಆಶ್ಚರ್ಯದಿಂದ ಬೆಟ್ಟಿಬಿದ್ದು ನೋಡಿದನು. ಆಗ ಮುದುಕ ಕೋಪದಿಂದ, "ಹಾಗೆ ಪಿಳಿ ಪಿಳಿ ನೋಡುವಿಯೇನು? ಬೀಗದ ಕೈ ತೆಗೆದು ಕೊಡಪ್ಪಾ" ಎಂದನು.

"ಬೀಗದ ಕೈ ನನ್ನ ಹತ್ತಿರ ಇದೆಯೆಂದರೆ ಏನು ನಿಮ್ಮ ಮಾತಿನ ಅರ್ಥ?" ಎಂದನು ಗಿರಿಬಾಲ ಮತ್ತಷ್ಟು ಆಶ್ಚರ್ಯದಿಂದ.

"ನಿನ್ನ ಪೆಟ್ಟಿಗೆಯ ಬೀಗದ ಕೈ ನಿನ್ನ ಹತ್ತಿರ ಇರದೆ ಮತ್ತೆ ಯಾರ ಹತ್ತಿರ ಇರುತ್ತದೆ? ಅರ್ಥ ನನ್ನನ್ನು ಕೇಳುವುದೆಂದರೇನು!" ಎಂದನು ಮುದುಕ ರೇಗಿದಂತೆ.

ಆಗ ಗಾಡಿಯವನು, "ಆ ಬೀಗದ ಕೈ ಬೇಗನೆ ತೆಗೆದುಕೊಟ್ಟು ಗಾಡಿ ಹೊರಡಿಸಿರಯ್ಯಾ, ನಿಮ್ಮನ್ನು

ಇಲ್ಲಿ ಇಳಿಸಿ ನಾನು ಹಿಂದಿರುಗಿ ಹೋಗಬೇಕಾಗಿದೆ" ಎಂದನು ಗಿರಿಬಾಲನೊಂದಿಗೆ.

ಗಿರಿಬಾಲನಿಗೆ ಏನು ಮಾಡುವುದೆಂದು ತೋರಲಿಲ್ಲ. ದಿಗಿಲಿನಿಂದ ಅತ್ತಿತ್ತ ನೋಡುತ್ತ ನಿಂತಿರಲು, "ನಮಗೂ ಕಾಯಲು ಸಾಧ್ಯವಿಲ್ಲ" ಎಂದು ರಕ್ಷಕ ಭಟರು ಪೆಟ್ಟಿಗೆಯ ಬೀಗವನ್ನು ಎರಡೇಟಿಗೆ ಒಡೆದುಬಿಟ್ಟರು. ತೆರೆದು ನೋಡಲು, ಅದರೊಳಗೆ ಅನೇಕ ಹಳೆಯ ಬಟ್ಟೆಯ ಚಿಂದಿಗಳಿದ್ದುವು. ಅದನ್ನೆಲ್ಲ ಎತ್ತಿ ಹಾಕಿ ನೋಡಲು, ಅಡಿಯಲ್ಲಿ ಒಂದು ಮೂಟೆ ಕಾಣಿಸಿತು. ಆ ಮೂಟೆಯೊಳಗೆ ಅನೇಕ ಬೆಲೆಬಾಳುವ ಬಂಗಾರದ ಆಭರಣಗಳಿದ್ದುವು.

ರಕ್ಷಕಭಟರು ಗಿರಿಬಾಲನ ಕುತ್ತಿಗೆಯ ಪಟ್ಟಿ ಹಿಡಿದು, "ಎಲೋ! ಕಳ್ಳಾ! ಹಳೇ ವಸ್ತ್ರಗಳ ಅಡಿಯಲ್ಲಿ ಹುದುಗಿಸಿದರೆ ಕಳ್ಳ ಸೊತ್ತು ದಕ್ಕುತ್ತದೆಂದುಕೊಂಡೆಯಾ? ಪಾಲೂರಿನ ಜಮೀನುದಾರರ ಮನೆಯೊಳಗಿನಿಂದ ದೋಚಿದ ಕಳ್ಳ ನೀನೇ ಏನು?" ಎಂದರು ರೌದ್ರಾಕಾರರಾಗಿ.

ಗಿರಿಬಾಲ ಗದಗದ ನಡುಗುತ್ತ, "ಅಯ್ಯಾ, ನಾನು ಕಳ್ಳನಲ್ಲ. ಈ ಪೆಟ್ಟಿಗೆಯೂ ನನ್ನದಲ್ಲ. ಈ ಮುದುಕರದೇ. ನನ್ನ ಪಾಡಿಗೆ ಹೋಗುವ ನನ್ನನ್ನು ಸಹಾಯಕ್ಕಾಗಿ ಕರೆದುಕೊಂಡಿದ್ದಾರೆ ಈ ಮುದುಕರು. ನನ್ನ ಮಾತು ನಂಬಿರಯ್ಯಾ" ಎಂದನು.

ಮುದುಕನು ಕೋಪದ ಗರ್ಜನೆಯಿಂದ, "ಎಂಥಾ ಸುಳ್ಳು ಹೇಳುತ್ತಾನೆ ಈ ಪೋರ! ನನ್ನ ಮೇಲೆ ಕಳ್ಳತನ ಹಾಕುವಿಯೇನೋ? ನನ್ನ ವಯಸ್ಸನ್ನು ನೋಡಿಯಾದರೂ ಮರ್ಯಾದೆಯಿಂದ ಮಾತಾಡಲು ಕಲಿಯೋ!" ಎಂದನು.

ಇದನ್ನೆಲ್ಲ ಕೇಳಿ ರಕ್ಷಕಭಟರು ಆ ಮೂವರನ್ನೂ ನೋಡಿ, "ನಿಮ್ಮಲ್ಲಿ ಯಾರು ನಿಜ ಹೇಳುವಿರೋ, ಯಾರು ಸುಳ್ಳು ಹೇಳುವಿರೋ ಗೊತ್ತಾಗುವುದಿಲ್ಲ. ಅದಕ್ಕೆ ಕಚೇರಿಯೇ ಸರಿ! ಎಲ್ಲರೂ ಕೋತ್ವಾಲರ



ಬಳಿಗೆ ನಡೆಯಿರಿ" ಎಂದು ಅವರನ್ನು ಕೋತ್ವಾಲನ ಕಚೇರಿಗೆ ಕರೆದುಕೊಂಡು ಹೋದರು.

ಕೋತ್ವಾಲನಿಗೆ ಗಾಡಿಯವನ ಪರಿಚಯವಿದ್ದಿತು. ಮೊದಲು ಕೋತ್ವಾಲನು ಗಾಡಿಯವನನ್ನು ಮಾತಾಡಿಸಿ, ಅವನನ್ನು ಹೊರಟುಹೋಗಲು ಹೇಳಿದನು. ಆಮೇಲೆ ಅವನು ಮುದುಕನನ್ನೂ, ಗಿರಿಬಾಲನನ್ನೂ ಪ್ರಶ್ನೆ ಮಾಡಿದನು. ಅವರು ರಕ್ಷಕಭಟರೊಂದಿಗೆ ಹೇಳಿದಂತೆಯೇ ಪೆಟ್ಟಿಗೆ ತಮ್ಮದು ಅಲ್ಲವೆಂದೇ ಹೇಳಿದರು.

"ಇವರಿಬ್ಬರನ್ನೂ ಕಚೇರಿಯ ಕೋಣೆಗಳಲ್ಲಿ ಬಂಧಿಸಿಡಿರಿ" ಎಂದು ಕೋತ್ವಾಲನು ರಕ್ಷಕಭಟರಿಗೆ ಹೇಳಿ, ಮುದುಕ ಮತ್ತು ಗಿರಿಬಾಲರನ್ನು ನೋಡಿ, "ನಿಮ್ಮಿಬ್ಬರಲ್ಲಿ ಒಬ್ಬನು ಒಳ್ಳೇ ನಿಪುಣನಾದ ಪಕ್ಕಾ ಕಳ್ಳ. ಅದು ಯಾರೆಂದು ನಾಳೆ ಬೆಳಗ್ಗೆ ಗೊತ್ತಾಗುತ್ತದೆ" ಎಂದು ಹೇಳಿ ಅಲ್ಲಿಂದ ಎದ್ದು ತನ್ನ ಮನೆಗೆ ಹೋಗಿಬಿಟ್ಟನು.



ಮನೆಯಲ್ಲಿ ಅವನು ಊಟ ಮಾಡುವಾಗ ಏನೋ ಆಲೋಚಿಸಿ ಮೈಮರೆತ ಹಾಗಿರುವುದನ್ನು ನೋಡಿ ಅವನ ಹೆಂಡತಿ, ಸಂಗತಿ ಏನೆಂದು ಕೇಳಿದಳು.

ಕೋತ್ವಾಲನು ನಡೆದ ಸಂಗತಿಯನ್ನು ಅವಳೊಂದಿಗೆ ಹೇಳಿ, "ಇಷ್ಟು ಕಾಲದಿಂದ ಈ ಉದ್ಯೋಗದಲ್ಲಿದ್ದೇನೆ. ಅಪರಾಧಿಯನ್ನು ಕಂಡುಹಿಡಿಯುವುದರಲ್ಲಿ ಇಷ್ಟೊಂದು ಸಿಕ್ಕುಗಂಟು ಬಿದ್ದಿರಲಿಲ್ಲ" ಎಂದನು.

ಕೋತ್ವಾಲನ ಹೆಂಡತಿ ಸ್ವಲ್ಪಹೊತ್ತು ಆಲೋಚಿಸಿ, "ಇದು ಎಂಥದೋ ಸಿಕ್ಕುಬಿದ್ದ ಗಂಟೆಂದುಕೊಂಡು ನೀವೇ ಇನ್ನಿಷ್ಟು ಸಿಕ್ಕು ಮಾಡಿಕೊಳ್ಳುವ ಭ್ರಮೆಯಲ್ಲಿದ್ದೀರಿ. ಹೀಗೆ ಮಾಡಿಬಿಡಿ!" ಎಂದು ಏನು ಮಾಡಬೇಕೆಂಬುದನ್ನು ಗಂಡನಿಗೆ ಗುಟ್ಟಾಗಿ ಏನೋ ಹೇಳಿದಳು.

ಮರುದಿನ ಕೋತ್ವಾಲನು ಕಚೇರಿಗೆ ಹೋದ ಕೂಡಲೇ, ಮೊದಲು ಗಿರಿಬಾಲನನ್ನು ತನ್ನ ಬಳಿಗೆ ಕರೆಯಿಸಿ, "ನಮ್ಮ ಭಟರು ತಪ್ಪಾಗಿ ತಿಳಿದು ನಿನ್ನನ್ನು ಹಿಡಿದು ತಂದಿದ್ದಾರೆ. ಜಮೀನುದಾರರ ಮನೆಯನ್ನು ದೋಚಿಕೊಂಡ ಕಳ್ಳ, ಸೊತ್ತುಗಳೊಂದಿಗೆ ಸಿಕ್ಕಿಬಿದ್ದನೆಂದು ಸಮಾಚಾರ ಬಂದಿದೆ. ನೀನು ಹೊರಟುಹೋಗಬಹುದು!" ಎಂದು ಮುದುಕನ ಪೆಟ್ಟಿಗೆಯನ್ನು ಗಿರಿಬಾಲನಿಗೆ ಕೊಡಲು ಭಟರಿಗೆ ಹೇಳಿದನು.

ಆ ಪೆಟ್ಟಿಗೆಯನ್ನು ನೋಡಿದ ಕೂಡಲೇ ಗಿರಿಬಾಲನು ಹೆದರಿಬೀಳುತ್ತ, "ಅಯ್ಯಾ, ಇದು ನನ್ನ ಪೆಟ್ಟಿಗೆಯಲ್ಲ. ನಾನು ಬರಿಗೈಯಲ್ಲೇ ಉದ್ಯೋಗ ಹುಡುಕಲು ಪಟ್ಟಣಕ್ಕೆ ಹೊರಟವನು. ಇದು ನಿಜಕ್ಕೂ ಆ ಮುದುಕರ ಪೆಟ್ಟಿಗೆ. ನನಗೆ ಬೇಡ" ಎಂದನು.

"ಬಾಡಿಗೆ ಗಾಡಿಗಾರನು ಹೇಳಿದ ಸಾಕ್ಷಿಯಂತೆ ಕೂಡಾ ಇದು ನಿನ್ನದೇ. ಯಾರ ಸೊತ್ತು ಅವರಿಗೆ ಒಪ್ಪಿಸುವುದು ನಮ್ಮ ಕರ್ತವ್ಯ. ತೆಗೆದುಕೊಂಡು ಹೋಗಿಬಿಡು. ಸುಮ್ಮನೆ ರಗಳೆ ಮಾಡಬೇಡ" ಎಂದು ಕಠಿಣವಾಗಿ ಹೇಳಿದನು ಕೋತ್ವಾಲ.

ಮೊದಲು ಅಲ್ಲಿಂದ ಹೊರಬಿದ್ದು, ಆಮೇಲೆ ಮುದುಕನಿಗೆ ಪೆಟ್ಟಿಗೆಯನ್ನು ಕೊಡಬಹುದೆಂದುಕೊಂಡು, ಗಿರಿಬಾಲನು ಪೆಟ್ಟಿಗೆಯನ್ನು ಎತ್ತಿಕೊಂಡು ಅಲ್ಲಿಂದ ಹೊರಟನು.

ಗಿರಿಬಾಲನು ಅತ್ತಕಡೆ ಹೋದಕೂಡಲೇ ಕೋತ್ವಾಲನು ಮುದುಕನನ್ನು ತನ್ನ ಬಳಿಗೆ ಕರೆಯಿಸಿ "ನಿರ್ದೋಷಿಗಳಾದ ನಿಮ್ಮನ್ನು ತಿಳಿಯದೆ ಅವಮಾನಿಸಿಬಿಟ್ಟೆನು. ನೀವೂ ನಿಮ್ಮೊಂದಿಗಿದ್ದ ಆ ಹುಡುಗನೂ ಕಳ್ಳರಲ್ಲವೆಂದು ಗೊತ್ತಾಯಿತು. ಆ ಪೆಟ್ಟಿಯನ್ನು ಹುಡುಗನಿಗೆ ಕೊಟ್ಟು ಕಳುಹಿಸಿಬಿಟ್ಟೆನು. ನೀವೂ ನಿಮ್ಮ ದಾರಿ ಹಿಡಿದುಕೊಂಡು ಹೊರಟು ಹೋಗಬಹುದು" ಎಂದನು. ಪೆಟ್ಟಿಗೆಯನ್ನು ತೆಗೆದುಕೊಂಡು ಗಿರಿಬಾಲನು ಹೊರಟು

ಹೋದ ಸಂಗತಿ ಕೇಳಿ, ಮುದುಕನು ದೊಡ್ಡ ನಿರಾಶೆಯಿಂದ, ಹೇಗಾದರೂ ಹುಡುಕಾಡಿ ಅವನನ್ನು ಹಿಡಿಯಬೇಕೆಂದುಕೊಂಡು ಬೇಗ ಬೇಗನೇ ಅಲ್ಲಿಂದ ಹೊರಟನು.

ಆ ಬೀದಿಯಲ್ಲಿಯೇ ಒಂದುಕಡೆ ಒಂದು ಜಗಲಿಯ ಮೇಲೆ ಪೆಟ್ಟಿಗೆಯೊಂದಿಗೆ ಕುಳಿತಿರುವ ಗಿರಿಬಾಲನನ್ನು ನೋಡಿದನು ಮುದುಕ. ಕೂಡಲೇ ಓಡಿ ಮುದುಕನು ಪೆಟ್ಟಿಗೆಯನ್ನು ಎತ್ತಿಕೊಂಡು, "ಲೋ ಹುಡುಗಾ! ಹತ್ತು ಸಾವಿರ ಬೆಲೆ ಬಾಳುವ ನಗಗಳು ಸುಲಭವಾಗಿ ದೊರಕಿತೆಂದುಕೊಂಡಿರುವಿಯಾ?" ಎಂದನು ತಿರಸ್ಕಾರದಿಂದ.

"ಸಾಕು ನಿಮ್ಮ ಸಹವಾಸ! ನಿಮ್ಮ ಪೆಟ್ಟಿಗೆ ಬೇರೆ ನನಗೇಕೆ? ಇದನ್ನು ನಿಮಗೆ ಕೊಡಲಿಕ್ಕೇ ಇಲ್ಲಿ ಕೂತಿದ್ದೇನೆ. ಕೋತ್ವಾಲ ಸಾಹೇಬರು ಇದರಲ್ಲಿರುವುದು ಕಳ್ಳಸೊತ್ತು ಅಲ್ಲವೆಂದರು. ಆದರೂ ಈ ಪೆಟ್ಟಿಗೆ ನಿಮ್ಮದಲ್ಲವೆಂದು ಆ ರಕ್ಷಕ ಭಟರೊಂದಿಗೆ ಏಕೆ ಹೇಳಿದಿರೋ ನನಗೆ ಅರ್ಥವಾಗುವುದಿಲ್ಲ. ಇನ್ನು ನಿಮ್ಮ ದಾರಿ ನಿಮಗೆ, ನನ್ನ ದಾರಿ ನನಗೆ. ನೆಮ್ಮದಿಯಾಗಿ ಎಲ್ಲಿಯಾದರೂ ಸಣ್ಣ ಉದ್ಯೋಗವನ್ನು ನೋಡಿಕೊಳ್ಳುತ್ತೇನೆ. ಗ್ರಹಚಾರ ಬಿಟ್ಟಿತಪ್ಪ!" ಎನ್ನುತ್ತಾ ಜಗಲಿಯಿಂದ ಕೆಳಗಿಳಿದನು ಗಿರಿಬಾಲ.

ಅಷ್ಟರಲ್ಲಿ ಬಂದ ಕೋತ್ವಾಲನು, "ಓ! ಎದೆ ನೋವಿನ ತಾತನವರೇ! ಸ್ವಲ್ಪ ನಿಲ್ಲಿರಿ! ಆ ಪೆಟ್ಟಿಗೆಯಲ್ಲಿ ನಗನಟ್ಟುಗಳೇನಿಲ್ಲ. ಇರುವುದೆಲ್ಲಾ ಹಳೆಯ ಬಟ್ಟೆಗಳೇ" ಎಂದು ಕೂಗಿ ಹೇಳಿ ನಿಲ್ಲಿಸಿ, ತನ್ನ ಹಿಂದೆ ಬರುವ ರಕ್ಷಕಭಟರಿಗೆ ಮುದುಕನನ್ನು ತೋರಿಸುತ್ತ, "ಇವನೊಬ್ಬ ದೊಡ್ಡ ಕಳ್ಳ! ಪೆಟ್ಟಿಗೆಯಲ್ಲಿ ಇದ್ದುದೆಲ್ಲಾ ಜಮೀನುದಾರರ ಮನೆಯ ನಗಗಳೇ. ಇವನನ್ನು ಬಂಧಿಸಿ ಕೋಣೆಗೆ ಹಾಕಿರಿ!" ಎಂದು ಆಜ್ಞೆ ಮಾಡಿದನು.

ಇದನ್ನು ನೋಡಿ ಗಿರಿಬಾಲನು ಚಕಿತನಾಗಿ, "ಎಲ! ನಿಜವಾದ ಕಳ್ಳ ಸಿಕ್ಕಿದನೆಂದಾಯಿತು. ನಾನು ನಿರ್ದೋಷಿ ಎಂದು ಈಗ ನಿಮಗೆ ನಂಬುಗೆಯಾದದ್ದು ನೋಡಿ ನನಗೆ ಸಂತೋಷವಾಯಿತಯ್ಯಾ" ಎಂದನು.

ಕೋತ್ವಾಲನು ಅವನ ಹತ್ತಿರ ಬಂದು, ಭುಜವನ್ನು ತಟ್ಟುತ್ತ, ನಿನ್ನ ನಿರ್ದೋಷಿತ್ವ ಮಾತ್ರ ಗೊತ್ತಾದುದಲ್ಲ, ನಿನ್ನ ಪ್ರಾಮಾಣಿಕತೆ ಕೂಡಾ ನಿರೂಪಣವಾಗಿದೆ. ನಮ್ಮ ಕಚೇರಿಯಲ್ಲೇ ನಿನಗೆ ಒಂದು ಕೆಲಸ ಕೊಡುತ್ತೇನೆ. ಇಷ್ಟವೇನು?" ಎಂದು ಕೇಳಿದನು.

"ಅದಕ್ಕೆ ತಾನೇ ನಾನು ಹೊರಟಿದ್ದೇನೆ? ನಿಮ್ಮ ದಯೆಗೆ ತುಂಬಾ ಕೃತಜ್ಞನು" ಎಂದನು ಗಿರಿಬಾಲ.





# ಪರೀಕ್ಷೆಯ ಬೆಕ್ಕುಗಳು

**ಒಂದು** ಕಾಲದಲ್ಲಿ ಶ್ರೀಪುರವನ್ನು ಪಾಲಿಸಿಕೊಂಡಿದ್ದ ವಿದ್ಯಾಧರನೆಂಬ ರಾಜನಿಗೆ ಸುದರ್ಶನನೆಂಬವನು ಮಂತ್ರಿಯಾಗಿದ್ದನು. ಶ್ರೀಪುರವು ಬಹಳ ಚಿಕ್ಕ ರಾಜ್ಯವಾಗಿತ್ತು.

ಅದರ ನೆರೆಹೊರೆಗಳಲ್ಲಿ ಸೈನಿಕ ಬಲದಲ್ಲಿ ಬಲಿಷ್ಠವಾದ ಕೆಲವು ರಾಜ್ಯಗಳಿದ್ದುವು. ಆದರೂ ಮಂತ್ರಿ ಸುದರ್ಶನನ ಕುಶಾಗ್ರ ಬುದ್ಧಿ, ರಾಜತಂತ್ರ, ನೈಪುಣ್ಯತೆಗಳಿಂದ ಯಾವ ರಾಜ್ಯವೂ ಶ್ರೀಪುರವನ್ನು ಆಕ್ರಮಿಸುವ ಕೆಲಸಕ್ಕೆ ಕೈಹಾಕಲಿಲ್ಲ.

ಕಾಲಕ್ರಮದಲ್ಲಿ ಸುದರ್ಶನನಿಗೆ ವಯಸ್ಸಾಗುತ್ತಾ ವೃದ್ಧಾಪ್ಯದ ದಶೆಗೆ ಬಂದನು. ಅವನು ಆಗಾಗ ಕಾಯಿಲೆ ಬೀಳತೊಡಗಿದನು. ಕಡೆಗೆ ಆಸ್ಥಾನ ವೈದ್ಯರು ಅವನಿಗೆ ಮಂತ್ರಿಪದವಿಯಿಂದ ವಿರಮಿಸಿ ವಿಶ್ರಾಂತಿ ತೆಗೆದುಕೊಳ್ಳುವುದು ಒಳ್ಳೆಯದೆಂದು ಸಲಹೆ ಮಾಡಿದರು. ಇನ್ನು ಅವನಿಗೆ ಪೂರ್ತಿ ವಿಶ್ರಾಂತಿ ನೀಡುವುದು ಒಳ್ಳೆಯದೆಂದು ರಾಜನಿಗೂ ತೋರಿತು.

ಆದುದರಿಂದ ಒಂದು ದಿನ ವಿದ್ಯಾಧರ ರಾಜನು ಸುದರ್ಶನನೊಂದಿಗೆ, "ತಾವು ಪದವಿಯಿಂದ ವಿರಮಿಸಬೇಕಾದುದು ತುಂಬ ಅಗತ್ಯವೆಂದೇ ಕಾಣುತ್ತದೆ. ತಾವು ಪದವಿಯಲ್ಲಿರುವಾಗಲೇ ಒಬ್ಬ ಮಂತ್ರಿಯನ್ನು ಆರಿಸಿಕೊಳ್ಳುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ, ನಿಮಗೆ ಹಿಡಿಸುವವನೇ ನಿಮ್ಮ ಸ್ಥಾನಕ್ಕೆ ಬಂದರೆ ಒಳ್ಳೆಯದು. ಏನನ್ನುವಿರಿ?" ಎಂದನು.

ಸುದರ್ಶನನು ಅದಕ್ಕೆ ಒಪ್ಪಿಕೊಂಡು ಮಂತ್ರಿ ಪದವಿಗೆ ಅರ್ಹತೆಯುಳ್ಳವರಿಗಾಗಿ ರಾಜ್ಯದಲ್ಲಿ ಡಂಗುರ ಹಾಕಿಸಿದನು.

ಅದನ್ನು ಕೇಳಿ ಒಳ್ಳೆಯ ವಿದ್ಯಾವಂತರಾದ ಅನೇಕ ಮಂದಿ ಯುವಕರು ರಾಜಧಾನಿಗೆ ಬಂದು, ಸುದರ್ಶನನನ್ನು ನೋಡಲು ಹೋದರು. ಅವನು ಅವರಿಗೆ ಅನೇಕ ಪರೀಕ್ಷೆಗಳನ್ನು ಇಟ್ಟು, ಎಲ್ಲದರಲ್ಲಿಯೂ ಸಮಾನರಾಗಿ ಕಾಣುವ ಮೂವರನ್ನು ಮಾತ್ರ ಆರಿಸಿದನು. ಇನ್ನು ಅವರೊಳಗೆ ಒಬ್ಬನನ್ನು ಮಂತ್ರಿ ಪದವಿಗೆ ನಿಯಮಿಸಲು ತಕ್ಕುದಾದ ಪರೀಕ್ಷೆ ಮಾಡಬೇಕಾಗಿತ್ತು.

ವಿನಯ, ಚಂದ್ರಕಾಂತ, ಶ್ರೀಧರ ಎಂಬ ಆ ಮೂವರು ಯುವಕರನ್ನೂ ಸುದರ್ಶನನು, ರಾಜನ

ಎ. ಪಿ. ಶ್ರೀನಿವಾಸರಾವ್



ಸಮಕ್ಷಮದಲ್ಲಿ ಸಭೆಯಲ್ಲಿರುವವರಿಗೆಲ್ಲಾ ಪರಿಚಯ ಮಾಡಿಸಿ, ಸೇವಕರ ಮೂಲಕ ಒಬ್ಬೊಬ್ಬನಿಗೆ ಒಂದೊಂದು ಸೊರಕಲು ಬೆಕ್ಕನ್ನು ಕೊಡಿಸಿ, "ನೀವು ಮೂರು ತಿಂಗಳವರೆಗೆ ಈ ಬೆಕ್ಕನ್ನು ನಿಮಗೆ ತೋರುವ ಹಾಗೆ ಬೆಳೆಸಿರಿ. ಅದಕ್ಕಾಗಿ ಖಜಾನೆಯಿಂದ ಒಬ್ಬೊಬ್ಬರು ಒಂದೊಂದು ಸಾವಿರ ಬಂಗಾರದ ನಾಣ್ಯ ತೆಗೆದುಕೊಳ್ಳಿರಿ. ಅದು ಬೆಕ್ಕಿನ ಪೋಷಣೆಗಾಗಿ ಅಂದುಕೊಳ್ಳಿರಿ. ಮೂರು ತಿಂಗಳಾದ ಮೇಲೆ ನಿಮ್ಮ ನಿಮ್ಮ ಬೆಕ್ಕುಗಳೊಂದಿಗೆ ಇಲ್ಲಿಗೆ ಬನ್ನಿ" ಎಂದು ಹೇಳಿದನು.

ಮೂರು ತಿಂಗಳಾದ ಮೇಲೆ ವಿನಯನೂ, ಚಂದ್ರಕಾಂತನೂ, ಶ್ರೀಧರನೂ, ತಮ್ಮ ತಮ್ಮ ಬೆಕ್ಕುಗಳೊಂದಿಗೆ ಸಭೆಗೆ ಬಂದರು. ಮೂರು ಬೆಕ್ಕುಗಳು ಮೂರು ವಿಧಗಳಾಗಿದ್ದವು.

ವಿನಯನ ಬೆಕ್ಕು ಬಲಿಷ್ಠವಾಗಿದ್ದಿತು. ಅದನ್ನು ನೋಡಿ ಸಭೆಯಲ್ಲಿರುವ ಅನೇಕರು ಇದು ಬೆಕ್ಕೋ, ಪ್ರಾಯಕ್ಕೆ ಬರುವ ಹುಲಿ ಮರಿಯೋ ಎಂದು ಬೆರಗಾದರು. ಶ್ರೀಧರನ ಬೆಕ್ಕು ಆರೋಗ್ಯವಾಗಿ ಕಣ್ಣಿಗೆ ಸೊಗಸಾಗಿ ಕಾಣಿಸಿತು. ಚಂದ್ರಕಾಂತನ ಬೆಕ್ಕು ಮಾತ್ರ ಎಲ್ಲರಿಗೂ ಕನಿಕರ ಹುಟ್ಟುವಂತೆ, ಇನ್ನಿಷ್ಟು ಸೊರಗಿ ನಡುಗುತ್ತ ಸಾಯಲು ಸಿದ್ಧವಾಗಿರುವಂತೆ ಕಂಡುಬಂತು.

ಸುದರ್ಶನನು ಆ ಮೂವರನ್ನೂ ಬೆಕ್ಕನ್ನು ಬೆಳೆಸಿದ ರೀತಿಯನ್ನು ವಿವರಿಸುವಂತೆ ಹೇಳಿದನು.

ಮೊದಲು ವಿನಯನು, "ನೀವು ಕೊಟ್ಟ ಧನದಿಂದ ಬೆಕ್ಕಿಗೆ ಹಾಲು ಬೆಣ್ಣೆಗಳೊಂದಿಗೆ ಪಂಚಭಕ್ಷ್ಯ ಪರಮಾನ್ನಗಳನ್ನೂ ತಿನ್ನಲು ಕೊಟ್ಟು ಬೆಳೆಸಿದೆನು. ಅದಕ್ಕೆ ಖರ್ಚಾಗಿ ಉಳಿದ ಐನೂರು ಬಂಗಾರದ ನಾಣ್ಯಗಳನ್ನು ಇದೋ ತಂದಿದ್ದೇನೆ" ಎಂದನು.

ಆ ಮೇಲೆ ಶ್ರೀಧರನು, "ಬೆಕ್ಕು ಪ್ರಧಾನವಾಗಿ ಮಾಂಸಾಹಾರಿಯಾದುದರಿಂದ, ತುಂಬಾ ಇಲಿಗಳಿರುವ ನನ್ನ ಮಿತ್ರನ ಮನೆಯಲ್ಲಿ ಅದನ್ನು ಬಿಟ್ಟೆನು. ಆದರೆ ದಿನಾ ಅದಕ್ಕೆ ಹೊಟ್ಟೆ ತುಂಬ ಆಹಾರ ಸಿಗದೆ ಹೋಗಬಹುದು. ಈ ಸಂಶಯದಲ್ಲಿ ಬೆಳಗ್ಗಿನ ಹೊತ್ತಿನಲ್ಲಿ ಅದಕ್ಕೆ ದಣಿಹಾಲು ಕೊಡುತ್ತಿದ್ದೆನು. ಅದಕ್ಕೆ ತಗಲಿದ ಖರ್ಚು ಕಳೆದು ಉಳಿದ ಒಂಭೈನೂರು ಬಂಗಾರದ ನಾಣ್ಯಗಳನ್ನು ತಂದಿದ್ದೇನೆ" ಎಂದನು.

ಅನಂತರ ಚಂದ್ರಕಾಂತನು, "ಬೆಕ್ಕಿಗೆ ಪ್ರತ್ಯೇಕವಾಗಿ ನಾನು ಯಾವ ಆಹಾರವನ್ನೂ ಕೊಡಲಿಲ್ಲ. ಅದು ತನ್ನಿಂದಾದಷ್ಟು ತನ್ನ ಆಹಾರ ಸಂಪಾದಿಸಿಕೊಳ್ಳುತ್ತ ನನ್ನ ಮನೆಯಲ್ಲಿಯೇ ಇತ್ತು. ಬೆಕ್ಕಿನಂತಹ ಮಹತ್ವವೇನಿಲ್ಲದ ಸಾಧಾರಣ ಪ್ರಾಣಿಗೆ ಪ್ರಜೆಗಳದಾದ ಖಜಾನೆಯ ಹಣವನ್ನು ಖರ್ಚು ಮಾಡುವುದು ವ್ಯರ್ಥವೆಂದುಕೊಂಡು ತಾವು ಕೊಟ್ಟ ಸಾವಿರ ಬಂಗಾರದ ನಾಣ್ಯ ವಾಪಾಸು ತಂದಿದ್ದೇನೆ. ಇದಕ್ಕಾಗಿ ನಾನೇನೂ ಶ್ರಮಿಸಲಿಲ್ಲ. ಈ ಹಣದಿಂದ ಪ್ರಜೆಗಳಿಗೆ

ಉಪಯೋಗವಾಗುವಂತಹ ಎಷ್ಟೋ ಕೆಲಸಗಳನ್ನು ಮಾಡಬಹುದಷ್ಟೇ ಎಂದುಕೊಂಡೆನು" ಎಂದನು.

ಸಭೆಯಲ್ಲಿದ್ದವರೆಲ್ಲರೂ ಚಂದ್ರಕಾಂತನು ಮಂತ್ರಿಯಾಗಿ ಬರುವನೆಂದು ಅಂದುಕೊಂಡರು. ಸುದರ್ಶನ ಮಂತ್ರಿ ಸಭಿಕರನ್ನು ನೋಡಿ ರಾಜನೊಂದಿಗೆ "ಶ್ರೀಪುರಕ್ಕೆ ಮಂತ್ರಿಯಾಗಲು ಅರ್ಹತೆಯುಳ್ಳವನು ಶ್ರೀಧರನೇ" ಎಂದನು.

ಆ ಮಾತು ಕೇಳಿ ವಿದ್ಯಾಧರ ರಾಜನೂ, ಸಭಿಕರೂ ಆಶ್ಚರ್ಯಪಟ್ಟರು. ಅದನ್ನು ತಿಳಿದು ಸುದರ್ಶನ ಮಂತ್ರಿ, "ಇವರು ಮೂವರೂ ಬೆಕ್ಕುಗಳನ್ನು ಬೆಳೆಸಿದ ಕ್ರಮವು ಹೇಗೆಂಬುದನ್ನು ನೀವೆಲ್ಲರೂ ಕೇಳಿದ್ದೀರಿ. ವಿನಯನಲ್ಲಿ ಇಂಗಿತ ಜ್ಞಾನದ ಅಂಶ ಕಡಿಮೆ. ಒಂದು ಬೆಕ್ಕನ್ನು ಸಾಕಲು ಮೂರು ತಿಂಗಳ ಕಾಲದಲ್ಲಿ ಐನೂರು ಬಂಗಾರದ ನಾಣ್ಯಗಳನ್ನು ವ್ಯಯಿಸಿದ್ದಾನೆ. ಬೆಕ್ಕು ಎಷ್ಟೇ ಬಲವಾಗಿ ಚುರುಕಾಗಿದ್ದರೂ ಇಲಿಗಳನ್ನು ಹಿಡಿಯುವುದಕ್ಕಿಂತ ಹೆಚ್ಚಿನ ಪ್ರಯೋಜನವಾದ ಘನಕಾರ್ಯವೇನನ್ನೂ ಮಾಡದು. ಅದಕ್ಕಾಗಿ ಅಷ್ಟೊಂದು ಖರ್ಚು ಅನಗತ್ಯ.

"ಇನ್ನು ಚಂದ್ರಕಾಂತನ ಸಂಗತಿ ಹೇಗಿದೆ ಎಂದರೆ ಅವನಲ್ಲಿ ವಿವೇಕಕ್ಕೆ ಮೀರುವ ಜಿಪುಣತನವಿದೆ. ಅಲ್ಲದೆ ಮೂದರಿಗಾದರೂ ದಯಾಗುಣವಿರುವುದು ಕಾಣದು. ಜೀವಕಾರುಣ್ಯದ ಲಕ್ಷಣವೂ ಅವನ ಕ್ರಮದಲ್ಲಿಲ್ಲ. ಬೆಕ್ಕನ್ನು ಬೆಳೆಸಬೇಕೆಂಬ ಮಾತನ್ನೂ ಲಕ್ಷಿಸಲಿಲ್ಲ. ಇವೇನೂ ಇಲ್ಲದವನು ಒಂದು ರಾಜ್ಯಕ್ಕೆ ಸರಿಯಾದ ಮಂತ್ರಿಯಾಗಿರಲಾರನು. ಬೆಕ್ಕು ಹೆಚ್ಚಾಗಿ ಸೊರಗಿ ಹೋಗುತ್ತಿರುವಾಗ ಕೂಡಾ ಅದಕ್ಕೆ ಸರಿಯಾದ ಆಹಾರ ದೊರಕುವುದಿಲ್ಲವೆಂದು ತಿಳಿದು ತಕ್ಕ ಆಹಾರ ಕೊಡಬೇಕಿತ್ತು.

"ಈ ಪರೀಕ್ಷೆಯಲ್ಲಿ ನೂರಕ್ಕೆ ನೂರು ಭಾಗ ಗೆಲ್ಲುವವನು ಶ್ರೀಧರನೇ. ಅವನು ಬೆಕ್ಕಿಗೆ ಸಹಜ ಆಹಾರವಾದ ಇಲಿಗಳಿಗಾಗಿ ಅದನ್ನು ತನ್ನ ಮಿತ್ರನ ಮನೆಯಲ್ಲಿ ಬಿಟ್ಟಿದ್ದಾನೆ. ಅದರಿಂದ ಬೆಕ್ಕಿನ ಹೊಟ್ಟೆ ತುಂಬುವುದರೊಂದಿಗೆ ಆ ಮಿತ್ರನಿಗೂ ಇಲಿಗಳ ಕಾಟ ಕಡಿಮೆಯಾಗಿರುತ್ತದೆ. ಅಷ್ಟೇ ಅಲ್ಲದೆ, ಯಾವುದಕ್ಕೂ ಒಳ್ಳೆಯದೆಂಬ ಮುಂದಾಲೋಚನೆಯಿಂದ ಅದಕ್ಕೆ ಒಂದು ಹೊತ್ತು ಸ್ವಯಂ ಹಾಲು ಕೊಟ್ಟಿದ್ದಾನೆ. ಮಂತ್ರಿಯಾಗುವವನಿಗೆ ಇರಬೇಕಾದ ವಿವೇಕವೂ ತಾರತಮ್ಯ ಜ್ಞಾನವೂ ಶ್ರೀಧರನಲ್ಲಿರುವ ಸಹಜ ಲಕ್ಷಣಗಳೆನ್ನಲು ಸಂದೇಹವಿಲ್ಲ. ಆದರಿಂದಲೇ ಅವನನ್ನು ಮುಖ್ಯಮಂತ್ರಿ ಪದವಿಗೆ ಆರಿಸಿಕೊಂಡೆನು" ಎಂದನು.

ಈ ವಿವರಣೆಯನ್ನು ಕೇಳಿ ಸಭಿಕರೆಲ್ಲರೂ ಹರ್ಷದಿಂದ ಚಪ್ಪಾಳೆ ತಟ್ಟಿದರು. ರಾಜನೂ ಸಂತೃಪ್ತನಾದನು.






## ೧೫

[ಚಂದ್ರವರ್ಮನನ್ನು ನೋಡಿ ರಾಜಭಟರು ಅವನೊಬ್ಬ ಮಾಂತ್ರಿಕನೆಂದುಕೊಂಡರು. ಚಂದ್ರವರ್ಮನು ವೃದ್ಧನಿಂದ ಕಂಚುಕೋಟೆಗೆ ಹೋಗುವ ಮಾರ್ಗಸೂಚಕ ಪಟವನ್ನು ಪಡೆದುಕೊಂಡಿದ್ದನು. ಅಂತಲೇ ಅವನು ಭಟರೊಂದಿಗೆ ರುದ್ರಪುರಕ್ಕೆ ಹೋದನು. ಪುರಜನರು ಚಂದ್ರವರ್ಮನನ್ನು ನೋಡಿದ ಕೂಡಲೇ "ಮಹಾ ಮಾಂತ್ರಿಕನಿಗೆ ಜೈ" ಎನ್ನುತ್ತ ಬಹು ವೈಭವದ ಸ್ವಾಗತ ಹೇಳಿದರು. — ಇನ್ನು ಓದಿರಿ]

ಚಂದ್ರವರ್ಮನು ಧೈರ್ಯದಿಂದ ತನ್ನನ್ನು ತಾನೇ ಸಮಾಧಾನಪಡಿಸಿಕೊಳ್ಳುತ್ತ, ಜನರ ವೈಭವದ ಸ್ವಾಗತವನ್ನು ಗಂಭೀರಭಾವದಿಂದ ಕೈಯಾಡಿಸಿ ಸ್ವೀಕರಿಸುತ್ತ, ಮಹೋನ್ನತವಾದ ಮುಖದ್ವಾರದ ಬಳಿಗೆ ತಲಪಿದನು.

ಅಲ್ಲಿ ಶಿವಸಿಂಹ ರಾಜನೂ, ಮಂತ್ರಿಗಳೂ, ದೊಡ್ಡ ದೊಡ್ಡ ಉದ್ಯೋಗಸ್ಥರೂ ಅವನಿಗೆ ಇದಿರಾಗಿ ಬಂದು, "ಬರಬೇಕು, ಮಹಾ ಮಾಂತ್ರಿಕರಿಗೆ ಸ್ವಾಗತ!" ಎಂದು ಘೋಷಿಸಿ ಘನ ರೀತಿಯಲ್ಲಿ ಸ್ವಾಗತಪೂಜೆ ಮಾಡಿದರು.

ಚಂದ್ರವರ್ಮನು ಕುದುರೆಯಿಂದ ಇಳಿದ ಕೂಡಲೇ ರಾಜನು ಅವನ ಹತ್ತಿರ ಬಂದು, ಬಹಳ ಆಪ್ಯಾಯತೆಯಿಂದ ನಗುತ್ತ, ಅವನ ಭುಜದ ಮೇಲೆ ಕೈಹಾಕಿ, "ಚಂದ್ರವರ್ಮ, ಇಷ್ಟೊಂದು ಚಿಕ್ಕ ವಯಸ್ಸಿನಲ್ಲಿ ನಿನ್ನಷ್ಟು ದೊಡ್ಡ ಮಂತ್ರವಾದಿಗಳಾದವರು ಈವರೆಗೆ ಯಾರೂ ಇರಲಿಕ್ಕಿಲ್ಲ. ನನ್ನ ರಾಜ್ಯದ ಸರಹದ್ದಿನಲ್ಲಿ ಸೇರಿಕೊಂಡು ನಮ್ಮ ದೇಶಕ್ಕೆ ಕಂಟಕಪ್ರಾಯನಾಗಿದ್ದ ಮಾಯಾ ಮಾಂತ್ರಿಕ ಶಂಖನನ್ನು ನೀನು ಹತ ಮಾಡಿದುದನ್ನು ನೋಡಿ ನನಗೂ ನನ್ನ ಪ್ರಜೆಗಳಿಗೂ ಬಹಳ ಸಂತೋಷವಾಗಿದೆ!" ಎಂದನು.



ಶಿವಸಿಂಹ ರಾಜನು ಹೇಳಿದ ಮಾತುಗಳನ್ನು ಕೇಳಿ ಚಂದ್ರವರ್ಮನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ತನ್ನ ಸಮಾಚಾರವೆಲ್ಲವೂ ಈ ಶಿವಸಿಂಹನಿಗೆ ಚೆನ್ನಾಗಿ ಗೊತ್ತಿರುವ ಹಾಗಿದೆ. ತಾನು ಅಂದುಕೊಂಡುದೆಲ್ಲವೂ ತಲೆಕೆಳಗಾಗಿ ಹೋಗುವುದೇನು? ಹೀಗೆಂದುಕೊಳ್ಳುತ್ತ ವಿವೇಕಿಯಾದ ಚಂದ್ರವರ್ಮನು ತನ್ನ ಆಶ್ಚರ್ಯವನ್ನು ಹೊರಗೆ ತೋರಿಸದೆ, ತಲೆದೂಗಿಕೊಂಡು ಮುಗುಳುನಗುತ್ತ, "ಹೌದೌದು, ಆ ಶಂಖನು ಮಹಾ ದುಷ್ಟ ಬುದ್ಧಿಯುಳ್ಳವನು, ಪರಮ ಪಾಪಿ. ತನ್ನ ವಿದ್ಯೆಗಳನ್ನು ಪರಪೀಡನೆಗಾಗೇ ಉಪಯೋಗಿಸುವವನು. ಅದಕ್ಕೇ ಅವನನ್ನು ಯಮಪುರಿಗೆ ಕಳುಹಿಸಬೇಕಾಯಿತು. ಎಷ್ಟು ಸಾಮರ್ಥ್ಯವುಳ್ಳವನಾದರೇನು? ಪರಪೀಡನೆ ಪಾಪ ತಾನೆ?" ಎಂದನು.

"ಈಗ ಆ ಶಂಖನಿರುವ ಬೆಟ್ಟದ ಮೇಲೆ ವಾಸ ಮಾಡಿಕೊಂಡಿರುವ ನಿನ್ನ ಮಿತ್ರ ಕಾಲಕೇತುವಿನ ಮೂಲಕ ನಿನ್ನ ಸಮಾಚಾರವೆಲ್ಲವನ್ನೂ ತಿಳಿದುಕೊಂಡೆನು. ಅವನಿಂದಲೇ ನಿನ್ನ ಶಕ್ತಿ ಸಾಮರ್ಥ್ಯಗಳೆಲ್ಲಾ ನನಗೆ ತಿಳಿಯಿತು. ಅವನ ಸಲಹೆಯಂತೆಯೇ ನಿನ್ನನ್ನು ಕಂಚುಕೋಟೆಗೆ ಹೋಗಿಬರಬೇಕೆಂದು ಕೇಳಿಕೊಳ್ಳಲು ನನ್ನ ಭಟರ ಮೂಲಕ ಇಲ್ಲಿಗೆ ನಿನ್ನನ್ನು ಆಹ್ವಾನಿಸಬೇಕಾಯಿತು. ಆ ಕಾರ್ಯಕ್ಕೆ ನಿನ್ನನ್ನು ಬಿಟ್ಟರೆ ಬೇರೆ ಸಮರ್ಥರಾರೂ ಇಲ್ಲ" ಎಂದನು ಶಿವಸಿಂಹ ರಾಜ.

"ಕಂಚುಕೋಟೆ! ಅದೊಂದು ದೊಡ್ಡ ಕೆಲಸವಲ್ಲ!" ಎಂದು ಚಂದ್ರವರ್ಮನು ನಗುವನ್ನು ಅರಳಿಸಿದನು. ಅಷ್ಟರಲ್ಲಿ ಮಂತ್ರಿ ರಾಜನ ಕಿವಿಯಲ್ಲಿ ಏನೋ ಹೇಳಲು, ರಾಜನು ಅರಮನೆಯೊಳಗೆ ನಡೆಯುತ್ತ, "ಚಂದ್ರವರ್ಮಾ, ಈಗ ನೀನು ಪ್ರಯಾಣದ ಬಳಲಿಕೆಯಲ್ಲಿರುವೆ. ಮೊದಲು ಊಟ ಮುಗಿಯಲಿ. ಆಮೇಲೆ ವಿಶ್ರಾಂತಿ ತೆಗೆದುಕೊಂಡು, ಇರುವ ಸಂಗತಿಯನ್ನು ಸಾವಕಾಶವಾಗಿ ಮಾತಾಡಿಕೊಳ್ಳೋಣ" ಎಂದು ಸೇವಕರನ್ನು ಕರೆದು ಚಂದ್ರವರ್ಮನನ್ನು ಉಪಚರಿಸಲು ಹೇಳಿದನು.

ಚಂದ್ರವರ್ಮನಿಗಾಗಿ ರಾಜಪ್ರಾಸಾದದಲ್ಲಿ ಉತ್ತಮವಾದ ಬಿಡದಿ ಏರ್ಪಡಿಸಲಾಗಿತ್ತು. ಅವನು ಸ್ನಾನ ಮಾಡಿ ಬಂದ ಕೂಡಲೇ ಬಗೆ ಬಗೆಯ ಮೇಲೋಗರ ಪದಾರ್ಥಗಳೊಂದಿಗೆ ಭೋಜನ ಮಾಡಿಸಲಾಯಿತು. ಆಮೇಲೆ ಪಟ್ಟೆಯ ಮಂಚದ ಮೇಲೆ ಸೊಗಸಾದ ಹಾಸಿಗೆಯಲ್ಲಿ ದಿಂಬುಗಳಿಗೆ ಒರಗಿ ನಿದ್ದೆ ಮಾಡಲು ಪ್ರಯತ್ನಿಸಿದನು. ಆದರೆ ಅವನಿಗೆ ನಿದ್ದೆಯೇ ಬರಲಿಲ್ಲ. ಶಂಖನ ಬೆಟ್ಟದ ಮೇಲಿರುವ ಕಾಪಾಲಿನಿಯೂ, ಕಾಲಕೇತುವಿನ ಮೂಲಕ ಶಿವಸಿಂಹ ರಾಜನು ತನ್ನನ್ನು ಕುರಿತು ಸ್ವಲ್ಪಮಟ್ಟಿಗೆ ತಿಳಿದುದೂ ನೆನಪಿಗೆ ಬಂತು. ಕಂಚುಕೋಟೆಗೆ ಹೋಗಬಲ್ಲವನು ತಾನೊಬ್ಬನೇ ಎಂದು ಕಾಲಕೇತು ಶಿವಸಿಂಹನೊಂದಿಗೆ ಹೇಳಿದುದರ ರಹಸ್ಯ



ವೇನಿದ್ದೀತು ? ಬಹುಶಃ ಕಂಚುಕೋಟೆಯಿಂದ ತನಗೆ ಪ್ರಯೋಜನವಿರುವುದೆಂದು ಕಾಲಕೇತು ತಿಳಿದಿರಬೇಕು.

ಈ ವಿಷಯ ಕುರಿತು ತೀವ್ರವಾಗಿ ಆಲೋಚನೆ ಮಾಡಿದಾಗ ಚಂದ್ರವರ್ಮನಿಗೆ ಕಾಲಕೇತುವಿನ ಗತ್ತು ಏನೆಂಬುದು ಗೊತ್ತಾಯಿತು. ತನಗೆ ಮತ್ತೆ ತನ್ನ ರಾಜ್ಯವನ್ನು ಜಯಿಸಿಕೊಳ್ಳಲು ಧನವು ಬೇಕಾಗಿತ್ತು. ಧನದ ಮೂಲಕ ಬಳಗವನ್ನು ಸಂಪಾದಿಸಬಹುದು. ಅವುಗಳಿಗೆಲ್ಲಾ ಕಂಚುಕೋಟೆಯಲ್ಲಿರುವ ಧನರಾಶಿ ತುಂಬಾ ಸಹಕಾರಿಯಾಗುವುದು ನಿಜವೇ ! ಕಾಲ ಕೇತು ತನಗೆ ಮಾಡುವ ಪರೋಕ್ಷ ಸಹಾಯವಿದು ! ಆದರೆ ಈ ಶಿವಸಿಂಹನು ಎಂಥವನೋ ?

ಚಂದ್ರವರ್ಮನು ಹೀಗೆ ಆಲೋಚಿಸಿಕೊಂಡಿರು ವಾಗ ಸೇವಕನೊಬ್ಬನು ಬಂದು, ರಾಜನೂ, ಪ್ರಧಾನ ಮಂತ್ರಿಯೂ ಮಂತ್ರಾಂಗ ಮಂದಿರದಲ್ಲಿ ಅವನಿ ಗಾಗಿ ಕಾಯುತ್ತಿರುವರೆಂದು ಹೇಳಿ ಹೋದನು. ಚಂದ್ರವರ್ಮನು ಸ್ವಲ್ಪ ಹೊತ್ತಿಗೆಲ್ಲಾ ತನ್ನ ದುಸ್ತು ಬದಲಾಯಿಸಿಕೊಂಡು ರಾಜನ ಮಂತ್ರಾಂಗ ಮಂದಿರಕ್ಕೆ ಹೋದನು.

ರಾಜನು ಅವನನ್ನು ಗೌರವದಿಂದ ಬರಮಾಡಿ ಕೊಂಡು ಉಚಿತಾಸನದಲ್ಲಿ ಕೂಡಿಸಿದನು. ಅನಂತರ ಮುಖ್ಯ ವಿಷಯಕ್ಕೆ ಬಂದು, "ಚಂದ್ರವರ್ಮಾ, ನಾನು ಕಂಚುಕೋಟೆಯಲ್ಲಿರುವ ಧನರಾಶಿಗಳಿಗಾಗಿ ಆಶೆಪಡುವುದಿಲ್ಲ, ಇದನ್ನು ಮೊದಲೇ ನಿನಗೆ ಹೇಳಿ ಬಿಡುವುದು ಒಳ್ಳೆಯದೆಂದು ಹೇಳಿದ್ದೇನೆ" ಎಂದನು ಶಿವಸಿಂಹ ರಾಜ.

ಚಂದ್ರವರ್ಮನು ಸುಮ್ಮನೆ ತಲೆಯಾಡಿಸಿದನು.

ಶಿವಸಿಂಹ ರಾಜನು ಮುಂದುವರಿಸುತ್ತ, "ಹಾಗಾದರೆ ಆ ಕಂಚುಕೋಟೆಯನ್ನು ಕುರಿತು ನನಗಿಷ್ಟು ಆಸಕ್ತಿ ಏಕೆಂದು ಪ್ರಶ್ನೆ ಬರುತ್ತದೆ. ಅದಕ್ಕೆ ನಾನು ಹೇಳುವ ಉತ್ತರವು ಸ್ವಲ್ಪ ವಿಚಿತ್ರ ವಾಗಿದ್ದೀತು. ಆದರೆ ಅದು ನೂರು ಪಾಲಿಗೂ ಸತ್ಯವಾದದ್ದು. ಆ ಕಂಚುಕೋಟೆ ಪಶ್ಚಿಮ ದಿಕ್ಕಿನ ಸಮುದ್ರ ತೀರದಲ್ಲಿರುವುದೆಂದು ಗೊತ್ತಿದೆಯಷ್ಟೆ ?" ಎಂದನು.

"ಹೌದು. ಪಶ್ಚಿಮ ಸಮುದ್ರದ ತೀರದಲ್ಲಿ ಅದು ಇದೆ. ಸಾವಿರ ವರ್ಷಗಳಿಂದ ಈ ಮಧ್ಯದಲ್ಲಿ ಭೂಲೋಕದ ಅದ್ಭುತವಾದ ಅದನ್ನು ನೋಡಿದ ಮಾನವ ಮಾತ್ರರು ಯಾರೂ ಇಲ್ಲವೆಂತಲೂ ಗೊತ್ತು" ಎಂದನು ಚಂದ್ರವರ್ಮ.

ಅವನ ಮಾತನ್ನು ಕೇಳಿ ಮಂತ್ರಿ ಆಶ್ಚರ್ಯದಿಂದ ರಾಜನನ್ನು ನೋಡಿದನು. ರಾಜನು ಗೋಣಾಡಿ ಸುತ್ತ, "ಇರಬಹುದು. ಆ ಕಂಚುಕೋಟೆಯ ಒಂದು ಬದಿಯ ಗೋಡೆಯನ್ನು ಸಮುದ್ರ ಜಲವು ಯಾವಾಗಲೂ ತಾಗಿಕೊಂಡಿರುವುದೆಂದು ಅನೇಕರ ನಂಬುಗೆ. ಹೌದೇನು ?" ಎಂದನು.

"ಹಾಗೆಂದು ನಾನೂ ಕೇಳಿದ್ದೇನೆ" ಎಂದನು ಚಂದ್ರವರ್ಮ.

"ಆ ಗೋಡೆಯ ಬದಿಯಲ್ಲಿರುವ ಸಮುದ್ರದ ನೀರಿನಲ್ಲಿ ಒಬ್ಬ ಮಾಂತ್ರಿಕನಿಂದ ಬಂಧಿಸಲ್ಪಟ್ಟ ಕೆಲವು ಅಪೂರ್ವ ಪ್ರಾಣಿಗಳಿರುವುವೆಂದು ನಮ್ಮ ಪೂರ್ವಿಕರ ನಂಬುಗೆ. ನಮ್ಮ ತಂದೆ ಅವುಗಳ ವಿಷಯ ತಿಳಿಯಲು ಬಹಳ ಪ್ರಯತ್ನ ಮಾಡಿದ್ದಾರೆ. ಯಾವ ಪ್ರಯೋಜನವೂ ಆಗಿರಲಿಲ್ಲ. ಇಚ್ಛಾ ಮಾತ್ರದಿಂದ ಮಾನವ ರೂಪವನ್ನೂ, ಮಹಾ ಕಾಲನಾಗದ ರೂಪವನ್ನೂ ಧರಿಸಬಲ್ಲವನಾದ ನಿನ್ನ ಸ್ನೇಹಿತ ಕಾಲಕೇತುವಿನ ಮೂಲಕ ಅಲ್ಲಿರುವ ಅಪೂರ್ವ ಪ್ರಾಣಿಗಳ ಕಂಚಿನ ಕುಂಡಗಳನ್ನು ನೀನು ತರಬಲ್ಲೆಯೆಂಬ ನಂಬುಗೆ ನನಗೆ ಆಯಿತು. ನನಗೆ ಇದರಲ್ಲಿ ಇಷ್ಟು ಆಸಕ್ತಿ ಬರಲು ಆ ಕುಂಡಗಳೇ ಕಾರಣವೆಂದು ಈಗ ತಿಳಿಯಿತಷ್ಟೆ?" ಎಂದನು ಶಿವಸಿಂಹ ರಾಜ.

ರಾಜನ ಮಾತನ್ನು ಕೇಳಿದ ಮೇಲೆ ಇದರಲ್ಲಿ ದೊಡ್ಡ ಮೋಸವಿದೆಯೆಂದು ಚಂದ್ರವರ್ಮನಿಗೆ ತೋರಿತು. ಅಪರೂಪದ ಪ್ರಾಣಿಗಳಿರುವುದೆಂದು ಹೇಳಲ್ಪಡುವ ಕಂಚು ಕುಂಡಗಳಿಗಾಗಿ ಯಾರೂ ಇಷ್ಟು ಶ್ರಮಪಡುವುದಿಲ್ಲ. ಶಿವಸಿಂಹನಿಗೆ ಬೇಕಾದುದು ಕಂಚಕೋಟೆಯೊಳಗೆ ಇರುವುದೆಂದು ಹೇಳಲಾಗುವ ಧನವೇ ನಿಜ. ಅದನ್ನು ಸಾಧಿಸಿಕೊಳ್ಳಲು ಅವನಿಂದಾಗದೆ, ನನಗೆ ಮಂತ್ರಶಕ್ತಿಗಳಿರುವುದೆಂದು ಭ್ರಮಿಸಿ ತನ್ನ ಸಹಾಯವನ್ನು ಕೇಳುತ್ತಿದ್ದಾನೆ. ನಿಜಕ್ಕೂ ಕಂಚುಕೋಟೆಯಲ್ಲಿ ಧನರಾಶಿಗಳು ಸಿಕ್ಕರೆ ಅವು ಶಿವಸಿಂಹನಿಗೆ ಸಿಕ್ಕದಂತೆ ಮೋಸಕ್ಕೆ ಪ್ರತಿಮೋಸವನ್ನು ಪ್ರಯೋಗಿಸಿ ಬುದ್ಧಿವಂತಿಕೆಯಿಂದ ಜಾರಿಕೊಳ್ಳಬಹುದೆಂಬ ಧೈರ್ಯ ಚಂದ್ರವರ್ಮನಿಗೆ ಬಂದಿತು. ಸುಳ್ಳು ಹೇಳುವವನಿಗೆ ಮೋಸಮಾಡುವುದರಿಂದ ಪಾಪವೇನೂ ಬಾರದು.

"ಮಹಾರಾಜರೇ, ನನ್ನಂತಹ ಮಂತ್ರವಾದಿಗಳಿಗೆ ಇಂತಹ ಕಷ್ಟಸಾಧ್ಯವಾದ ಕಾರ್ಯಗಳನ್ನು ಸಾಧಿಸುವುದೇ ಬೇಕಾದುದು. ಇಂತಹ ಸಾಹಸಗಳೆಂದರೆ ಮಂತ್ರಗಳಿಗೆ ಸಾಣೆ ಹಿಡಿಯಲು ಬರುವ ಅವಕಾಶವೆಂದು ತಿಳಿಯುತ್ತೇನೆ. ನಾನು ಒಳ್ಳೆಯ ಉತ್ಸಾಹದಿಂದಲೇ ಕಂಚುಕೋಟೆಗೆ ಹೋಗುತ್ತೇನೆ. ನನ್ನೊಂದಿಗೆ



"ನಿಮ್ಮ ಕೆಲಮಂದಿ ಸಿಬ್ಬಂದಿಗಳನ್ನೂ ಕಳುಹಿಸಿರಿ. ಅವರಲ್ಲಿ ದೇವಲನೆಂಬ ಯುವಕನು ಕೂಡಾ ಮುಖ್ಯವಾಗಿ ಇರಬೇಕು!" ಎಂದು ಚಂದ್ರವರ್ಮನು ತನ್ನ ಅಂಗೈಯನ್ನು ಪರೀಕ್ಷಿಸಿ ನೋಡಿ, "ಹೌದು. ದೇವಲನು ಬಹು ಮುಖ್ಯ" ಎಂದನು.

ಶಿವಸಿಂಹ ರಾಜನೂ, ಮಂತ್ರಿಯೂ ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡರು. ಒಂದೆರಡು ಕ್ಷಣ ಕಾಲ ರಾಜನು ಚಂದ್ರವರ್ಮನನ್ನು ನೋಡಿ, "ಆ ದೇವಲನ ತಂದೆಯಾದ ಮುದುಕನೊಬ್ಬ ಕಾಡಿನೊಳಗೆ ತಿರುಗಾಡಿಕೊಂಡಿದ್ದಾನೆಂದು ನಿನಗೆ ಗೊತ್ತಿದೆಯೇ? ಅವನನ್ನು ನೀನು ನೋಡಿರುವೆಯಾ?" ಎಂದು ಪ್ರಶ್ನಿಸಿದನು.

"ಯಾರು ಆ ಮುದುಕ? ಓಹೋ!..." ಎನ್ನುತ್ತ ಚಂದ್ರವರ್ಮನು ತನ್ನ ಅಂಗೈಯನ್ನು ಇನ್ನಷ್ಟು ತೀವ್ರವಾಗಿ ನೋಡುತ್ತ, "ಅವನು ಕಾಡಿನಲ್ಲೇ ಒಂದು ಗುಡಿಸಲಿನಲ್ಲಿ ಇದ್ದಾನೆ. ಇದರಲ್ಲಿ ಬಹು ಮುಖ್ಯನಾಗಿರುವವನು ಈ ಮುದುಕನೇ. ನೀವು ಅವನಿಗೆ ಅಗತ್ಯವಾದ ಸೌಕರ್ಯಗಳನ್ನು ಮಾಡಿಸಿ ಕೊಡುವುದು ಅತೀ ಅಗತ್ಯ. ಒಂದು ವೇಳೆ ಅವನು ನಗರಕ್ಕೆ ಬಂದು ಇರುವೆನೆಂದರೆ, ಅದಕ್ಕೆ ಬೇಕಾದ ಏರ್ಪಾಡು ಕೂಡಾ ಮಾಡಿಸಿಕೊಡಿರಿ. ನಾನು ಕಂಚು ಕೋಟೆಯ ಕಡೆಗೆ ಹೋಗುವ ಕೆಲಸವು ಆ ಮುದುಕ ಮತ್ತು ಅವನ ಮಗ ದೇವಲನ ಮೇಲೆಯೇ ಆಧಾರವಾಗಿದೆ" ಎಂದನು.

ಚಂದ್ರವರ್ಮನ ಮಾತಿಗೆ ರಾಜನಾಗಲೀ, ಮಂತ್ರಿಯಾಗಲೀ ಏನೂ ಹೇಳಲಿಲ್ಲ. ಸ್ವಲ್ಪ ತಡೆದು ರಾಜನು "ಹಾಗೇ ಆಗಲಿ, ನೀನು ಹೇಳಿದಂತೆಯೇ ಮಾಡುತ್ತೇವೆ. ದೇವಲನನ್ನು ನೀನು ಕರೆದುಕೊಂಡು ಹೋಗಬಹುದು. ನಿನಗೆ ರಕ್ಷಣೆಯಾಗಿ ಸೈನ್ಯವನ್ನೂ ಕೂಡಿಸಿ ಕೊಡುತ್ತೇನೆ. ಒಂದು ಸಾವಿರ ಮಂದಿ ಸುಸಜ್ಜಿತರಾದ ಸೈನಿಕರಿದ್ದರೆ ಸರಿಹೋಗುವುದೆ?" ಎಂದನು.

ಆ ಮಾತಿಗೆ ಚಂದ್ರವರ್ಮನು ಗಟ್ಟಿಯಾಗಿ ನಗುತ್ತ, "ನಾನು ಹೋಗುವುದು ಯಾರ ಮೇಲೋ





ಯುದ್ಧಕ್ಕೆ ಅಲ್ಲ ಮಹಾರಾಜಾ! ಒಂದು ವೇಳೆ ಯುದ್ಧವೇ ಮಾಡಬೇಕಾಗಿ ಬಂದರೆ, ಅದು ಅದೃಶ್ಯ ರೂಪದಲ್ಲಿದ್ದು, ನನ್ನ ಮಾರ್ಗವನ್ನು ಅಟಕಾಯಿಸುವ ದುಷ್ಟ ಶಕ್ತಿಗಳ ಮೇಲೆ ಯುದ್ಧ ಮಾಡಬೇಕಾಗಿ ಬರುತ್ತದೆ. ಅದಕ್ಕೆ ನನ್ನ ಮಂತ್ರಕ್ಕೆ ಸಾಧ್ಯವಾಗುವ ಭೂತಶಕ್ತಿಗಳ ಹೊರತು ನಿಮ್ಮ ಸೈನಿಕರು ಯಾವ ಪ್ರಯೋಜನಕ್ಕೂ ಬಾರದು. ನನಗೆ ಬೇಕಾದುದು ಸಾಕಷ್ಟು ಆಹಾರ ಪದಾರ್ಥಗಳು, ಅವುಗಳನ್ನು ಹೊರಲು ಕೆಲವು ಕತ್ತೆಗಳು. ಆ ಕತ್ತೆಗಳನ್ನು ನಡೆಸಿಕೊಂಡು ಸಾಗಬೇಕಾದ ಕೆಲವು ಆಳುಗಳು, ಸುಮಾರು ಹತ್ತು ಮಂದಿ ನನ್ನೊಂದಿಗಿದ್ದರೆ ಸರಿಹೋಗುತ್ತದೆ. ಅವರು ಸೈನಿಕರಾಗಿರಬೇಕೆಂಬ ಅಗತ್ಯವೇನಿಲ್ಲ. ಹೆಚ್ಚು ಜನರಿದ್ದರೆ ಉಪದ್ರಗಳೂ ಹೆಚ್ಚೇ!" ಎಂದನು.

"ಹಾಗೆ ಬೇಡ. ನನ್ನ ಉದ್ಯೋಗಸ್ಥರಲ್ಲಿ ನಂಬುಗೆಯವರೂ ಧೈರ್ಯ ಸಾಹಸಗಳುಳ್ಳವರೂ ಆದ ನಾಲ್ಕೈದು ಮಂದಿಗಳನ್ನು ನಿನ್ನೊಂದಿಗೆ ಕಳುಹಿಸುತ್ತೇನೆ. ಅವರೊಂದಿಗೆ ಒಂದು ಐವತ್ತು ಮಂದಿ ಸೈನಿಕರೂ ಇರುತ್ತಾರೆ. ನಮ್ಮ ರಾಜ್ಯದ ಎಲ್ಲೆಯನ್ನು ದಾಟಿ, ನೀನು ಪಶ್ಚಿಮದ ಕಣಿವೆಯನ್ನು ಪ್ರವೇಶಿಸುವುದಕ್ಕೆ ಮೊದಲು, ಆ ಪ್ರಾಂತದ ಮಂಡಲಾಧೀಶನಾದ ವೀರಮಲ್ಲನು ನಿನಗೆ ಬೇಕಾದ ಇತರ ಸಹಾಯಗಳೇನಾದರೂ ಇದ್ದರೆ ಮಾಡುತ್ತಾನೆ. ಅವನಿಗೆ ನಾನೊಂದು ಪತ್ರವನ್ನೂ ಕೊಟ್ಟಿರುತ್ತೇನೆ. ನಿನಗೆ ಪ್ರಯೋಜನವಾದೀತು" ಎಂದನು ಶಿವಸಿಂಹ ರಾಜ.

ವೀರಮಲ್ಲನೆಂಬ ಹೆಸರು ಕೇಳಿದ ಕೂಡಲೇ ಚಂದ್ರವರ್ಮನಿಗೆ ತನ್ನ ಸೇನಾನಾಯಕನಾದ ಧೀರಮಲ್ಲನ ನೆನಪು ಬಂದಿತು. ಅವನೂ, ತನ್ನ ವಿಶ್ವಾಸದ ಸೇವಕ ಸುಬಾಹುವೂ ಏನಾದರೋ ಎಂಬ ಚಿಂತೆಯಲ್ಲಿ ಚಂದ್ರವರ್ಮನು ನಿಧಾನವಾಗಿ ಒಂದು ನಿಟ್ಟುಸಿರುಬಿಟ್ಟನು.

"ಮಹಾರಾಜರೇ, ನಿಮ್ಮ ಅಭಿಪ್ರಾಯಕ್ಕೆ ನಾನೇನೂ ಅಭ್ಯಂತರ ಹೇಳಲಾರೆ. ನಿಮಗೆ ತೋರಿದ ಹಾಗೆಯೇ ಮಾಡಿರಿ. ನಾಳೆ ಬೆಳಗ್ಗೆಯೇ ನನ್ನ ಪ್ರಯಾಣ ಪ್ರಾರಂಭವಾಗಬೇಕು. ಕಂಚುಕೋಟೆಗೆ ಹೋಗಿ ಸೇರುವುದರೊಳಗೆ ನಾನು, ಮಹಾರಣ್ಯಗಳನ್ನೂ, ಗುಡ್ಡ ಬೆಟ್ಟಗಳನ್ನೂ, ಮರುಭೂಮಿಗಳನ್ನೂ ದಾಟಬೇಕಾಗಿರುತ್ತದೆ. ಆಹಾರ ಪದಾರ್ಥಗಳನ್ನು ಹೊರುವ ಪ್ರಾಣಿಗಳು ಆಯಾ ಪ್ರಾಂತಗಳಿಗೆ ತಕ್ಕ ಹಾಗೆ ಉಪಯೋಗವಾಗುವಂಥವಾಗಿದ್ದರೆ ಒಳ್ಳೆಯದು. ಮರುಭೂಮಿಯ ಪ್ರಯಾಣಕ್ಕೆ ನನಗೆ ಒಂಟೆಗಳ ಅಗತ್ಯ ಬರಬಹುದು. ಇಂತಹ ಸೌಕರ್ಯಗಳನ್ನೆಲ್ಲ ನಿಮ್ಮ ಸರಹದ್ದಿನಲ್ಲಿರುವ ಮಂಡಲಾಧಿಪತಿ ವೀರಮಲ್ಲನು ನೋಡಿಕೊಳ್ಳುವಂತೆ ಏರ್ಪಾಡು ಮಾಡಿಸಿಬಿಡಿರಿ. ಅಷ್ಟು ಮಾಡಿದರೆ ಯಥೇಷ್ಟವಾಯಿತು" ಎಂದನು ಚಂದ್ರವರ್ಮ.

"ಅಂತಹುದನ್ನೆಲ್ಲಾ ನಾನು ನೋಡಿಕೊಳ್ಳುತ್ತೇನೆ. ಅದೆಲ್ಲಾ ನನ್ನ ಅಳವಿನೊಳಗಿರುವ ಕೆಲಸಗಳೇ. ನೀನು ಹೆಚ್ಚು ಚಿಂತಿಸಬೇಕಾದ ಅಗತ್ಯವೇ ಇಲ್ಲ" ಎಂದನು ಶಿವಸಿಂಹ.

ಮರುದಿನ ಪ್ರಾತಃಕಾಲದಲ್ಲಿ ಚಂದ್ರವರ್ಮನು ಕಂಚುಕೋಟೆಯ ದಿಕ್ಕಿಗೆ ಪ್ರಯಾಣ ಹೊರಟನು. ಶಿವಪುರದ ಮೇರೆಯ ವರೆಗೂ ರಾಜನೂ, ಮಂತ್ರಿಗಳೂ, ಪ್ರಜಾಪ್ರಮುಖರೂ ಅವನ ಜತೆಯಲ್ಲಿ ಹೋಗಿ ಚಂದ್ರವರ್ಮನನ್ನು ಸಾಗ ಕಳುಹಿಸಿದರು. ಅವನೊಂದಿಗೆ ಮುಖ್ಯ ಅನುಚರನಾಗಿ ಮುದುಕನ ಮಗ ದೇವಲನಿದ್ದನು. ರಾಜನು ಅವನನ್ನು ಕಾರಾಗಾರದಿಂದ ಬಿಡುಗಡೆ ಮಾಡಿಸಿ ಚಂದ್ರವರ್ಮನೊಂದಿಗೆ ಸೇರಿಸಿದ್ದನು. ಚಂದ್ರವರ್ಮನು ಅವನೊಂದಿಗೆ ಗುಟ್ಟಾಗಿ ಮಾತಾಡಿದ್ದೂ ಆಗಿತ್ತು.



ಅಲ್ಲಿಂದ ಚಂದ್ರವರ್ಮನು ಕಾಡಿನ ಮಾರ್ಗದಲ್ಲಿ ಕೆಲವು ಯೋಜನಗಳಷ್ಟು ಪ್ರಯಾಣ ಮಾಡಿದನು. ಅವನಿಗೆ ಮಾರ್ಗವನ್ನು ತಿಳಿಸಲು ಮುದುಕನು ಕೊಟ್ಟ ಚಿತ್ರಪಟವು ಅಷ್ಟೇನೂ ಉಪಯೋಗವಾಗಲಿಲ್ಲ. ಕಟ್ಟಡವಿಗಳೂ, ಎತ್ತರವಾದ ಬೆಟ್ಟಗಳೂ ಅವನ ಇದಿರಿಗಿದ್ದುವು. ಎಲ್ಲಿಯೂ ಬೇರೆ ಮಾನವರ ಸುಳಿವು ಕಾಣಲಿಲ್ಲ. ದಾರಿ ಎಂಬುದೇನೂ ಇಲ್ಲದೆ ಅವರು ಹೋದುದೇ ದಾರಿಯಾಗಬೇಕಾಯಿತು. ದಾರಿ ತಪ್ಪದಂತೆ ನಡೆಯುವರೆಂಬುದಕ್ಕೆ ಸೂರ್ಯೋದಯ ಸೂರ್ಯಾಸ್ತಮಾನಗಳೇ ಗುರುತು.

ಹೀಗೆ ಕೆಲವು ದಿನಗಳು ಪ್ರಯಾಣ ಮಾಡಿದ ಮೇಲೆ ಒಂದು ದಿನ ಬೆಳಗ್ಗಿನ ಹೊತ್ತಿನಲ್ಲಿ ದೇವಲನು ಒಂದು ಬಂಡೆಯ ಮೇಲೆ ನಿಂತು ಜೋರಾಗಿ ಚಪ್ಪಾಳೆಯನ್ನು ತಟ್ಟುತ್ತ, "ಅಗೋಗೊ! ನಾವು ಯಾವುದೋ ಶಿಥಿಲ ನಗರದ ಹತ್ತಿರ ಬಂದಿದ್ದೇವೆ. ಇದೇ ಕಂಚುಕೋಟೆಯಾಗಿರಲೂ ಸಾಕು!" ಎಂದು ಕೂಗಿ ಹೇಳಿದನು.

ಅವನ ಉತ್ಸಾಹದ ಶಬ್ದಗಳು ಎಲ್ಲರನ್ನೂ ಹುರುಪುಗೊಳಿಸುವಂತಾಯಿತು.

ಅವನ ಕೂಗು ಕೇಳಿ ಚಂದ್ರವರ್ಮನೂ, ಅವನೊಂದಿಗಿರುವ, ರಾಜನ ಭಟರೂ ಓಡುತ್ತಾ ಹೋಗಿ ದೇವಲನಿರುವ ಬಂಡೆಯ ಮೇಲೆ ಹತ್ತಿ, ಅವನು ತೋರಿಸಿದ ದಿಕ್ಕಿಗೆ ದೃಷ್ಟಿ ಹರಿಸಿದರು. ಇದಿರಿನಲ್ಲಿರುವ ಗುಡ್ಡದ ಕೆಳಭಾಗದಲ್ಲಿ ಶಿಥಿಲಾವಸ್ಥೆಯಲ್ಲಿರುವ ಒಂದು ಮಹಾ ನಗರವು ಅವರ ಕಣ್ಣಿಗೆ ಬಿತ್ತು. ಜರಿದುಬಿದ್ದ ಗೋಡೆಗಳೂ ಒಂದು ಬದಿಗೆ ವಾಲಿ ಬೀಳಲು ಸಿದ್ಧವಾಗಿರುವ ಮನೆಗಳ ಮಾಡುಗಳೂ, ಅವುಗಳ ನಡುವೆ ಸ್ವೇಚ್ಛೆಯಾಗಿ ಬೆಳೆದ ಗಿಡಮರಗಳೂ, ಹುಚ್ಚು ಬನಗಳೂ ನೋಡಲು ಭಯಾನಕವಾಗಿದ್ದುವು. ಅದರೊಂದಿಗೆ ಪುರಾತನ ವೈಭವವನ್ನು ಹುದುಗಿಸಿಕೊಂಡು ಕಾಣುತ್ತಿತ್ತು.

"ಇದು ಕಂಚುಕೋಟೆಯಂತೂ ಅಲ್ಲ. ಆದರೂ ನಾವು ಅಲ್ಲಿಗೆ ಹೋಗಿ ನೋಡಿಯೇಬಿಡೋಣ"

ಎಂದು ಚಂದ್ರವರ್ಮನು ಬಂಡೆಯ ಮೇಲಿನಿಂದ ಇಳಿದು ಆ ಕಡೆಗೇ ನಡೆದನು.

ಎಲ್ಲರೂ ಕೂಡಿ ಆ ಶಿಥಿಲ ನಗರದ ಒಳಗೆ ಹೋದಾಗ ಒಂದಾನೊಂದು ಪಾಳುಬಿದ್ದ ಮನೆಯ ಮುಂದೆ ಆಟವಾಡಿಕೊಂಡಿದ್ದ ಮೂರು ಹುಲಿಮರಿಗಳು ಅವರ ಕಣ್ಣಿಗೆ ಕಂಡುವು. ಅವು ಚಂದ್ರವರ್ಮನನ್ನೂ, ಅವನೊಂದಿಗಿರುವವರನ್ನೂ ನೋಡಿದ ಕೂಡಲೇ ಭುಸುಗುಡುತ್ತ ಒಂದೇ ಹಾರಿಗೆ ಪೊದರುಗಳಾಚೆಗೆ ಓಡಿಹೋದುವು. ಮರುಕ್ಷಣದಲ್ಲಿ ಅಲ್ಲಿಂದ ಹುಲಿಯ ಗಾಂಭೀರ್ಯದ ದೊಡ್ಡ ಗರ್ಜನೆ ಹೊರಟಿತು.

ಆ ಗರ್ಜನೆ ಕೇಳುತ್ತಲೇ ಚಂದ್ರವರ್ಮನು ತಟ್ಟನೆ ನಿಂತು, "ನಾವು ಈ ಮನೆಯನ್ನು ಸಮೀಪಿಸುವುದು ಕ್ಷೇಮವಲ್ಲ. ಸಪ್ಪಳ ಮಾಡದೆ ಬೇರೆ ಕಡೆಗೆ ಹೋಗೋಣ" ಎಂದು ಮತ್ತೊಂದು ದಿಕ್ಕಿಗೆ ದಾರಿ ತೆಗೆದನು.

ಸುಮಾರು ಐದಾರು ಹರದಾರಿ ಉದ್ದಗಲವಿರುವ ಆ ಶಿಥಿಲ ನಗರದಲ್ಲಿ ಎಲ್ಲಿಯೂ ಮಾನವರಿರುವ ಸೂಚನೆ ಕಾಣಲಿಲ್ಲ. ಅಲ್ಲಿದ್ದ ಪ್ರತಿ ಮನೆಗಳೂ ಶಿಥಿಲಾವಸ್ಥೆಯಲ್ಲಿದ್ದುವು. ಕೆಲವು ಕಾಲುದಾರಿಗಳು ಕಲ್ರಿಗೆ ಮಸಿ ಹಚ್ಚಿದಂತಿದ್ದವು. ಯಾವುದೋ ಒಂದು ಕಾಲದಲ್ಲಿ ಮಾನವರು ವಾಸಮಾಡಿದ್ದ ಆ ಮನೆಗಳಲ್ಲಿ ಕಾಡು ಹಂದಿಗಳೂ, ಚಿರತೆಗಳೂ ಮೊದಲಾದ ಕಾಡು ಪ್ರಾಣಿಗಳು ವಾಸಮಾಡಿಕೊಂಡಿದ್ದುವು.

ಚಂದ್ರವರ್ಮನು ನಗರದ ಮಧ್ಯಭಾಗಕ್ಕೆ ಹೋದಾಗ ಅಲ್ಲಿ ಎತ್ತರವಾದೊಂದು ಶಿಲಾಫಲಕವು ನಿಂತಿರುವುದು ಕಾಣಿಸಿತು. ಅದರ ಮೇಲೆ ಕಂಡೂ ಕಾಣದಂತಹ ಕೆಲವು ಅಕ್ಷರಗಳಿದ್ದುವು. ಚಂದ್ರವರ್ಮನು ಅದರ ಹತ್ತಿರ ಹೋಗಿ ಅಕ್ಷರಕ್ಕೆ ಅಕ್ಷರ ಹೊಂದಿಸಿ, ಅಂತೂ ಮೊತ್ತ ಶಾಸನವನ್ನೂ ಓದಿದನು. ಅದರಲ್ಲಿದ್ದ ಮುಖ್ಯ ವಿಷಯ ಇದು:

"ಇದು ಕರವೀರಪುರ. ಸಾವಿರ ವರ್ಷಗಳವರೆಗೆ ಸಂಪತ್ಸಮೃದ್ಧತೆಯಿಂದ ಮೆರೆದ ಈ ನಗರವನ್ನು ಉತ್ತರ ದಿಕ್ಕಿನಿಂದ ಬಂದ ಬರ್ಬರರೆಂಬ ಜಾತಿಯವರು ದಾಳಿಯಿಟ್ಟು ಕೊಳ್ಳೆ ಹೊಡೆದು ಆ ಧನವನ್ನು ತಮ್ಮ ರಾಜಧಾನಿಯಾದ ಕಂಚುಕೋಟೆಗೆ ಸೇರಿಸಿದ್ದಾರೆ."

ಚಂದ್ರವರ್ಮನು ಶಾಸನವನ್ನು ಓದಿ, ತನ್ನ ಅನುಚರರ ಕಡೆಗೆ ತಿರುಗಿ, "ಇನ್ನು ನಾವು ಇಲ್ಲಿ ವೃಥಾ ಕಾಲಹರಣ ಮಾಡಬಾರದು. ಈ ಶಿಥಿಲ ನಗರದಲ್ಲಿ ಕಲ್ಲುಮುಳ್ಳುಗಳ ಹೊರತು ಇನ್ನೇನೂ ಇಲ್ಲ. ಇದು ಕಂಚುಕೋಟೆಯಲ್ಲ. ಇನ್ನು ಹೋಗೋಣ ನಡೆಯಿರಿ" ಎಂದನು.

ಎಲ್ಲರೂ ಅಲ್ಲಿಂದ ಪಶ್ಚಿಮ ದಿಕ್ಕನ್ನು ಗುರಿಯಿಟ್ಟು ಪ್ರಯಾಣ ಹೊರಟರು. —(ಇನ್ನೂ ಇದೆ)





# ನಿದರ್ಶನ

ಕಥೆಗಳ ಮೇಲೆ ಕಥೆ ಹೇಳಿ ಪ್ರಶ್ನಿಸುವ ಬೇತಾಳದ ಹಟಕ್ಕೆ ಬಿಡದೆ ಉತ್ತರ ಹೇಳುವ ಪ್ರತಿ ಹಟಗಾರನಾದ ರಾಜಾ ತ್ರಿವಿಕ್ರಮನು, ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹಾಕಿಕೊಂಡು ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯುತೊಡಗಿದನು. ಆಗ ಬೇತಾಳವು ಶವದ ನಾಲಗೆಯ ಮೂಲಕ ಮಾತಾಡಲು ತೊಡಗಿ, "ಎಲೈ ಮಹಾರಾಜನೇ! ನಿನ್ನನ್ನು ಇಷ್ಟೊಂದು ಕಠಿಣವಾದ ಶ್ರಮಕ್ಕೆ ಗುರಿಪಡಿಸಿದವನು ಯಾವ ಗುರುಪ್ರವರನೋ, ಭಕ್ತನೋ, ಯೋಗಿಯೋ ಆಗಿರಬೇಕೆಂದು ನನಗೆ ಅನುಮಾನವಾಗಿದೆ. ಏಕೆಂದರೆ ಅಂಥವರು ತಮ್ಮ ವಾಕ್ಚಾತುರ್ಯದಿಂದ ಎಂತಹ ಬುದ್ಧಿವಂತನನ್ನಾದರೂ ಅಪಮಾರ್ಗ ಹಿಡಿಸಬಲ್ಲರು. ಅಂತಹವರಿಂದ ತೀವ್ರವಾದ ಪರೀಕ್ಷೆಗೆ ಗುರಿಯಾಗಲ್ಪಟ್ಟ ಪೂರ್ಣಚಂದ್ರನೆಂಬವನ ಕಥೆಯನ್ನು ಈಗ ಹೇಳುತ್ತೇನೆ, ಸ್ವಾರಸ್ಯವಾದ ಈ ಕಥೆಯನ್ನು ಕೇಳುತ್ತಾ ನಡೆದರೆ ಶ್ರಮ ತಿಳಿಯಲಾರದು" ಎಂದು ಕಥೆಯನ್ನು ಹೇಳಲು ಪ್ರಾರಂಭಿಸಿತು:

ಬೇತಾಳ ಕಥೆಗಳು



ರಾಮಚಂದ್ರಪುರದಲ್ಲಿ ವಾಸವಾಗಿರುವ ಪೂರ್ಣಚಂದ್ರನು ಸ್ವಲ್ಪ ಕೂಡಾ ದೇವರ ಮೇಲೆ ನಂಬುಗೆ ಇಲ್ಲದವನು. ಒಂದು ಸಾರಿ ಆ ಊರಿಗೆ ಒಬ್ಬ ಯೋಗಿಪುಂಗವನು ಬಂದು, ದೈವಭಕ್ತಿಯಿಂದಾಗುವ ಪ್ರಯೋಜನವನ್ನು ಕುರಿತು ಸುತ್ತಲೂ ಕೂಡಿದ ಜನರಿಗೆ ಬೋಧನೆ ಮಾಡಿದನು.

ಎಲ್ಲಾ ಮುಗಿದ ಮೇಲೆ ಪೂರ್ಣಚಂದ್ರನು ಆ ಯೋಗಿಯನ್ನು ಏಕಾಂತದಲ್ಲಿ ಹೋಗಿ ನೋಡಿ, "ಸ್ವಾಮಿ, ನೀವು ಪದೇ ಪದೇ ದೈವಭಕ್ತಿಯನ್ನು ಕುರಿತು ತುಂಬಾ ಹೇಳುತ್ತಾ ಇರುವಿರಿ. ಆದರ ಮೇಲೆ ನಿಮಗೆ ನಂಬುಗೆ ಗಟ್ಟಿಯಾಗಿದೆಯೇ? ಅದಕ್ಕೆ ನಿದರ್ಶನವೇನೆಂದು ಹೇಳಲು ಸಾಧ್ಯವೆ?" ಎಂದು ಕೇಳಿದನು.

"ನಿನ್ನ ಸುತ್ತಲೂ ಇರುವ ಈ ಪ್ರಪಂಚವೇ ದೇವರ ಅಸ್ತಿಕತೆಗೆ ಮುಖ್ಯವಾದ ನಿದರ್ಶನವಪ್ಪಾ" ಎಂದನು ಯೋಗಿ.

"ದೇವರು ಇಲ್ಲವೆಂದರೂ ಬೀಸುವ ಗಾಳಿ ನಿಲ್ಲದು. ಪ್ರವಹಿಸುವ ನದಿ ನಿಂತುಬಿಡದು. ಯಾರ ಜೀವಿತವೂ ಸ್ತಂಭಿಸಿ ನಿಲ್ಲದು. ದೇವರು ಇದ್ದಾನೆಂಬುದಕ್ಕೆ ಪ್ರತ್ಯೇಕ ನಿದರ್ಶನವೊಂದು ಬೇಕೇಬೇಕು. ಪ್ರಪಂಚವು ಕಣ್ಣಿಗೆ ಕಾಣುವಂತಹ ನಿದರ್ಶನ ಮಾತ್ರ. ಕೇವಲ ಈ ನಂಬುಗೆ ಮಾತ್ರವೇ ಸಾಲದು. ನಿಜವಾಗಿಯೂ ದೇವರಿಂದ ನಡೆಯುವ ವಿಶೇಷವೇನಾದರೂ ಇದೆಯೆ?" ಎಂದು ಕೇಳಿದನು ಪೂರ್ಣಚಂದ್ರ.

ಯೋಗಿಗೆ ಪೂರ್ಣಚಂದ್ರನ ಸಂದೇಹವು ಅರ್ಥವಾಯಿತು. ಔಷಧವು ರೋಗಗಳನ್ನು ಗುಣಪಡಿಸುತ್ತದೆ. ಅನ್ನವು ಹಸಿವೆಯನ್ನು ತೀರಿಸುತ್ತದೆ. ಶಾಸ್ತ್ರಗಳು ಸೃಷ್ಟಿ ರಹಸ್ಯಗಳನ್ನು ತಿಳಿಸುತ್ತವೆ. ಅವೆಲ್ಲವೂ ಮನುಷ್ಯನು ಸ್ವಂತ ಪ್ರಯತ್ನದಿಂದ, ಅಭ್ಯಾಸದಿಂದ, ಸಾಧನೆಗಳಿಂದ ತಿಳಿದುಕೊಂಡಂಥವು. ಇವುಗಳಿಗೆಲ್ಲ ಮನುಷ್ಯನ ನಂಬುಗೆಯಲ್ಲಿ ಯಾವ ಪ್ರಸಕ್ತಿಯೂ ಇಲ್ಲ. ದೇವರ ವಿಷಯವು ಹಾಗಲ್ಲ. ಕೆಲವು ಭಕ್ತರು ನಂಬುಗೆಯಿಂದಲೇ ದೇವರು ಇದ್ದಾನೆಂದು ತಿಳಿಯುತ್ತಾರೆ. ಸರಿ. ಇರುವನೆಂದೇ ತಿಳಿಯೋಣ. ಹಾಗೆ ತಿಳಿಯುವುದರಿಂದ ಇದ್ದಾನೆಂದು ನಂಬಿಬಿಡಲು ಸಾಧ್ಯವಿಲ್ಲ. ಅದಕ್ಕೆ ಸರಿಯಾದ ನಿದರ್ಶನ ಮಾತ್ರ ಎಲ್ಲಿದೆ? ಇಲ್ಲ.

"ನಿನಗೆ ನಿದರ್ಶನ ತಾನೇ ಬೇಕು? ನಿರ್ಮಲವಾದ ಮನಸ್ಸಿನಿಂದ ಭಗವಂತನನ್ನು ಏನಾದರೂ ಬೇಕೆಂದು ಕೇಳಿಕೋ. ಆ ನಿನ್ನ ಕೋರಿಕೆ ತೀರಿಬಿಟ್ಟರೆ, ಅಂದರೆ ನೀನು ಕೇಳಿದ್ದು ನಿನಗೆ ಸಿಕ್ಕಿಬಿಟ್ಟರೆ ಭಗವಂತನು ಇರುವನೆಂದು ನಂಬುವೆಯಾ?" ಎಂದು ಯೋಗಿ ಕೇಳಿದನು.

"ನನಗೆ ಹಾಗೆ ಕೇಳುವಂತಹ ಯಾವ ಕೋರಿಕೆಯೂ ಇಲ್ಲ. ಹಾಗೇನಾದರೂ ಬೇಕಾಗಿದ್ದರೆ ಭಗವಂತನನ್ನು ಕೇಳಲಾರೆ. ಹಾಗೆ ಕೇಳಿ ಪಡೆಯು

ವವನು ನಾನಲ್ಲ. ನಾನೇ ಕಷ್ಟಪಟ್ಟು ಸಾಧಿಸಿಕೊಳ್ಳುತ್ತೇನೆ" ಎಂದನು ಪೂರ್ಣಚಂದ್ರ.

"ಅದೆಲ್ಲಾ ನನಗೆ ತಿಳಿಯಿತು. ಒಂದು ವರ್ಷದ ಮೇಲೆ ಮತ್ತೆ ನಾನು ಈ ಊರಿಗೆ ಬರುತ್ತೇನೆ. ನಾನು ಹೇಳಿದ ಹಾಗೆ ನೀನು ಮಾಡಿ ನೋಡುವಿ. ನಿನಗೆ ನಿದರ್ಶನವೂ ಆಗ ಸಿಗುತ್ತದೆ" ಎಂದನು ಯೋಗಿಪುಂಗವ.

ಯೋಗಿಯನ್ನು ಮತ್ತೇನೂ ಕೇಳುವ ಗೊಡವೆಗೆ ಪೂರ್ಣಚಂದ್ರನು ಹೋಗಲಿಲ್ಲ. ಯೋಗಿ ಹೊರಟು ಹೋದ ಮೇಲೆ ಯೋಗಿಯ ಮಾತನ್ನು ಅವನು ಲಕ್ಷ್ಯ ಮಾಡಲೂ ಇಲ್ಲ. ಹೆಚ್ಚು ಪ್ರಶ್ನೆ ಮಾಡಿ ಅವನನ್ನು ನೋಯಿಸಲೂ ಬಯಸಲಿಲ್ಲ. ಯೋಗಿಯಿಂದ ತನಗೆ ಸರಿಯಾದ ಉತ್ತರ ಕೊಡಲು ಸಾಧ್ಯವಿಲ್ಲವೆಂದೇ ಅಂದುಕೊಂಡನು.

ಹೀಗಿರುವಾಗ ಆ ಊರಿನಲ್ಲಿರುವ ಭಾಗ್ಯವಂತನೊಬ್ಬನಿಗೆ ಏನೋ ರೋಗ ಬಂತು. ಯಾವ ಔಷಧಗಳಿಂದಲೂ ಅವನ ವ್ಯಾಧಿ ಗುಣವಾಗಲಿಲ್ಲ. ಜಾತಕ ದೋಷವೇನಾದರೂ ಇದೆಯೇನೋ ಎಂದು, ಜೋಯಿಸರಿಂದ ಅವನ ಜಾತಕ ಚಕ್ರವನ್ನು ಪರೀಕ್ಷೆ ಮಾಡಿಸಲಾಯಿತು.

"ಈ ರೋಗವು ಔಷಧಗಳಿಂದ ಗುಣವಾಗುವಂತಹುದಲ್ಲ. ನಾಸ್ತಿಕನೊಬ್ಬನು ಆಲಯ ಪ್ರವೇಶ ಮಾಡಿ, ಮನಃಪೂರ್ವಕವಾಗಿ ಇವನ ರೋಗ ಗುಣವಾಗಬೇಕೆಂದು ಬೇಡಿದರೆ ಮಾತ್ರ ಭಗವಂತನು ಈ ವ್ಯಾಧಿಯನ್ನು ಗುಣವಾಗುವಂತೆ ಮಾಡುತ್ತಾನೆ" ಎಂದು ಜೋಯಿಸನು ಹೇಳಿದನು.

ಆ ಇಡೀ ಊರಿನಲ್ಲಿ ಪೂರ್ಣಚಂದ್ರನೊಬ್ಬನೇ ನಾಸ್ತಿಕನು. ಆ ಸಂಗತಿ ಎಲ್ಲರಿಗೂ ಗೊತ್ತಿದ್ದಿತು. ಭಾಗ್ಯವಂತನ ಕೆಲಮಂದಿ ಬಂಧುಗಳು ಅವನಿಗೆ ವಿಷಯವನ್ನು ಹೇಳಿ, ಹಾಗೆ ಮಾಡುವಂತೆ ಬೇಡಿಕೊಂಡರು. ಆದರಿಂದ ಭಾಗ್ಯವಂತನ ರೋಗವು



ಗುಣವಾಗುವುದೆಂದು ಎಲ್ಲರೂ ನಂಬಿರುವರೆಂಬುದು ಸ್ಪಷ್ಟವಾಯಿತು.

ಇದನ್ನು ಕೇಳಿ ಪೂರ್ಣಚಂದ್ರನಿಗೆ ಆಶ್ಚರ್ಯವಾಯಿತು. ತಾನು ಆಲಯದೊಳಗೆ ಪ್ರವೇಶಿಸಲಾರೆನೆಂದು ತಿಳಿದು ಆ ಭಗವಂತನೇ ನಿದರ್ಶನ ತೋರಿಸಲು ತನ್ನ ಬಳಿಗೆ ಹೀಗೆ ಕರೆಯಿಸಿಕೊಳ್ಳುವನೋ? ಆ ಯೋಗಿ ಕೂಡಾ ಇದನ್ನೇ ಹೇಳಿರಬಹುದೆ? ಎಂದು ಅನುಮಾನವಾಯಿತು ಅವನಿಗೆ. ಆದುದರಿಂದ ಇದರ ನಿಜಾನಿಜಗಳನ್ನು ಪರೀಕ್ಷಿಸಬೇಕೆಂದು ಅವನಿಗೆ ತೋರಿತು.

ಒಳ್ಳೆಯ ಗುಣದವನಾದ ಆ ಭಾಗ್ಯವಂತನ ಪ್ರಾಣವನ್ನು ರಕ್ಷಿಸಲಿಕ್ಕಾಗಿ ಪೂರ್ಣಚಂದ್ರನು ಆಲಯದೊಳಗೆ ಹೋದನು. ಭಗವಂತನ ವಿಗ್ರಹವನ್ನು ಶ್ರದ್ಧೆಯಿಂದ ನೋಡಿ ನಂಬುಗೆ ಏರ್ಪಡಿಸಿಕೊಂಡು "ನೀನೊಬ್ಬನು ಇರುವಿಯಾದರೆ ಈ ರೋಗದಿಂದ ಆ ಭಾಗ್ಯವಂತನನ್ನು ಕಾಪಾಡ

ಬೇಕು ! ಎಲ್ಲರೂ ಇದನ್ನು ನಂಬಿದ್ದಾರೆ. ನಾನೂ ನಂಬಿ ಕೇಳಿಕೊಳ್ಳುತ್ತೇನೆ" ಎಂದು ಬೇಡಿಕೊಂಡನು.

ಮರುದಿನವೇ ಆ ಭಾಗ್ಯವಂತನ ರೋಗವು ಯಾರೋ ಒರೆಸಿ ಬಿಸುಟ ಹಾಗೆ ಪೂರ್ತಿ ವಾಸಿಯಾಗಿ ಹೋಯಿತು.

ಇದನ್ನು ನೋಡಿ ಪೂರ್ಣಚಂದ್ರನು ಅತ್ಯಂತ ಆಶ್ಚರ್ಯಪಟ್ಟನು. ಆದರೆ ಅವನನ್ನು ಇನ್ನೊಂದು ಅನುಮಾನವು ಕಾಡತೊಡಗಿತು. ಪ್ರಾರ್ಥನೆ ಮಾಡಿದ ಮಾತ್ರಕ್ಕೆ ಭಗವಂತನು ಎಲ್ಲರಿಗೂ ಸುಖವನ್ನು ಪ್ರಸಾದಿಸುವನಾದರೆ ಈ ಪ್ರಪಂಚದಲ್ಲಿ ಇಷ್ಟೆಲ್ಲ ಸಮಸ್ಯೆಗಳು ಏಕೆ ಇರುತ್ತವೆ ?

ಭಾಗ್ಯವಂತನ ರೋಗ ಗುಣವಾದುದು ದೇವರಿರುವನೆಂಬುದಕ್ಕೆ ನಿದರ್ಶನವಲ್ಲವೆಂದೂ, ಅದು ಕಾಕತಾಳೀಯವಾಗಿ ನಡೆದ ಘಟನೆಯೆಂದೂ ಪೂರ್ಣಚಂದ್ರನು ಭಾವಿಸಿದನು. ಆದರೆ ಹಾಗೆಂದುಕೊಂಡು ಸುಮ್ಮನಿರಲು ಮಾತ್ರ ಅವನಿಂದ ಸಾಧ್ಯವಾಗಲಿಲ್ಲ. ಕಾಕತಾಳೀಯವು ಒಂದುಸಾರಿತಾನೇ ನಡೆದೀತು ?

ಪೂರ್ಣಚಂದ್ರನ ಪ್ರಾರ್ಥನೆಯಿಂದ ಭಾಗ್ಯವಂತನ ರೋಗವನ್ನು ಗುಣಪಡಿಸಿತೆಂದು ತಿಳಿದು ಎಲ್ಲೆಲ್ಲಿಯ ಜನರೆಲ್ಲ ಅವನ ಮನೆಗೆ ಬರತೊಡಗಿದರು. ಅವರ ಒಬ್ಬೊಬ್ಬರ ಸಮಸ್ಯೆಯನ್ನು ಕೇಳುತ್ತಿದ್ದ ಹಾಗೆ ಪೂರ್ಣಚಂದ್ರನಿಗೆ ಬುದ್ಧಿ ಮಂಕಾದಂತಾಯಿತು. ಈ ಪ್ರಪಂಚದಲ್ಲಿ ಎಷ್ಟೆಲ್ಲ ಸಮಸ್ಯೆಗಳು ! ಇವುಗಳನ್ನೆಲ್ಲ ತನ್ನ ಪ್ರಾರ್ಥನೆ ಪರಿಷ್ಕರಿಸಿಬಿಡುತ್ತದೆಂದರೆ ಅವನಿಗೆ ನಂಬಲಿಕ್ಕೇ ಸಾಧ್ಯವಾಗಲಿಲ್ಲ. ಆದರೂ ಪೂರ್ಣಚಂದ್ರನು ನಿರ್ಮಲವಾದ ಮನಸ್ಸಿನಿಂದ ಆಲಯದೊಳಗೆ ಹೋಗಿ ಭಗವಂತನನ್ನು ಬೇಡಿಕೊಳ್ಳುತ್ತಾ ಬಂದನು. ಪೂರ್ಣಚಂದ್ರನ ಪ್ರತಿ ಪ್ರಾರ್ಥನೆಯೂ ಫಲಿಸಿಕೊಂಡು ಬಂತು. ಅದು ಕಾಕತಾಳೀಯವಲ್ಲವೆಂಬುದು ಸ್ಪಷ್ಟವಾಯಿತು.

ಇದರಿಂದಾಗಿ ಪೂರ್ಣಚಂದ್ರನಿಗೆ ಬಹಳ ಕೀರ್ತಿ ಬಂದಿತು. ಜನರು ಅವನ ಮನೆಗೆ ಪ್ರತಿದಿನವೂ ತೀರ್ಥಯಾತ್ರೆಗೆ ಬರುವ ಹಾಗೆ ಬರುತ್ತಿದ್ದರು. ಅವರು ಹೇಳುವುದನ್ನೆಲ್ಲ ಪೂರ್ಣಚಂದ್ರನು ಶ್ರದ್ಧೆ



ಯಿಂದ ಕೇಳುವನು. ಸಮಸ್ಯೆಗಳ ಪರಿಹಾರವು ಮನುಷ್ಯನ ಕೈಯಲ್ಲಿಲ್ಲವೆಂದು ಅವನಿಗೆ ನಂಬುಗೆ ಬಂದಾಗಲೇ, ಮನುಷ್ಯ ಪ್ರಯತ್ನಗಳು ಮುಗಿದ ಮೇಲೆ ದೇವರೇ ಗತಿ ಎಂದಾದಾಗ ಮಾತ್ರವೇ ಅವನು ಹೋಗಿ ದೇವರನ್ನು ಪ್ರಾರ್ಥಿಸುತ್ತಿದ್ದನು. ಉಳಿದವರಿಗೆ ಮನುಷ್ಯ ಪ್ರಯತ್ನ ಮಾಡುವಂತೆ ಬುದ್ಧಿ ಹೇಳಿ ಕಳುಹಿಸುತ್ತಿದ್ದನು.

ಹೀಗೆ ಸ್ವಲ್ಪಕಾಲ ನಡೆದ ಮೇಲೆ ಪೂರ್ಣಚಂದ್ರನ ಹೆಂಡತಿ ಗಂಡನೊಂದಿಗೆ "ನೀವು ದೇವರ ಪ್ರಾರ್ಥನೆ ಮಾಡಿ ಎಂತೆಂಥವರ ಸಮಸ್ಯೆಗಳನ್ನೋ ಪರಿಹಾರ ಮಾಡುತ್ತೀರಿ. ನಿಮ್ಮಲ್ಲಿ ಇಷ್ಟೊಂದು ಶಕ್ತಿ ಇರುವಾಗ ನನ್ನದೊಂದು ಕೋರಿಕೆ ಮಾತ್ರ ಏಕೆ ತೀರಿಸಬಾರದು ? " ಎಂದು ಕೇಳಿದಳು.

"ಅದೇನು ನಿನ್ನ ಕೋರಿಕೆ ? " ಎಂದು ಪೂರ್ಣಚಂದ್ರನು ಕೇಳಿದನು.

"ನೀವು ಈ ದೇಶಕ್ಕೆ ರಾಜನಾಗಬೇಕು. ನಾನು ರಾಣಿಯಾಗಬೇಕು " ಎಂದಳು ಹೆಂಡತಿ.

ಮೊದಲು ಪೂರ್ಣಚಂದನು ಇದು ತಪ್ಪಾದ ಕೋರಿಕೆ ಎಂದುಕೊಂಡನು. ಆದರೆ ದೇವರು ಇದ್ದಾನೆಂಬುದಕ್ಕೆ ಸ್ಪಷ್ಟವಾದ ನಿದರ್ಶನ ಅದರಿಂದಲೇ ಲಭಿಸುವುದೆಂದು ಅವನಿಗೆ ತೋರಿತು. ಹೆಂಡತಿಯ ಕೋರಿಕೆಯಂತಾಗುವುದೇ ಸರಿಯಾದ ನಿದರ್ಶನವೆಂದುಕೊಂಡನು.

ಅವನು ಕೂಡಲೇ ಆಲಯದೊಳಗೆ ಹೋಗಿ, "ಈ ದಿನದಿಂದ ಏಳು ದಿನಗಳೊಳಗೆ ನಾನು ಈ ದೇಶಕ್ಕೆ ರಾಜನಾಗಬೇಕು. ಈಗ ಇರುವ ರಾಜನಿಗಿಂತಲೂ ಚೆನ್ನಾಗಿ ನಾನು ಪ್ರಜಾಪಾಲನೆ ಮಾಡುತ್ತೇನೆ. ಸಮಸ್ಯೆಗಳನ್ನೆಲ್ಲಾ ನಾನು ಪರಿಷ್ಕರಿಸಿಬಿಡುತ್ತೇನೆ" ಎಂದು ಪ್ರಾರ್ಥನೆ ಮಾಡಿದನು.

ಆಮೇಲೆ ಪೂರ್ಣಚಂದ್ರನು ತಾನು ರಾಜನಾದಹಾಗೆಯೇ ಭಾವಿಸಿದನು. ಆದರೆ ಒಂದು ವಾರ ಕಳೆಯಿತು. ಅವನ ಪ್ರಾರ್ಥನೆ ನೆರವೇರಲಿಲ್ಲ.

"ನೀವು ಕೇಳಿದ್ದು ಬಹಳ ದೊಡ್ಡ ಕೋರಿಕೆಯಾಯಿತೋ ಏನೋ ! ಹೋಗಲಿ, ನಮ್ಮ



ಸಂಪತ್ತು ಹೆಚ್ಚಾಗುವಂತೆ ಕೇಳಿಕೊಳ್ಳಿರಿ. ಅಷ್ಟೇ ಸಾಕು ಬಿಡಿರಿ" ಎಂದಳು ಹೆಂಡತಿ.

ಪೂರ್ಣಚಂದ್ರನು ಹಾಗೂ ಕೇಳಿಕೊಂಡು ನೋಡಿದನು. ಅದು ಕೂಡಾ ಯಾವ ಫಲವನ್ನೂ ತೋರಿಸಲಿಲ್ಲ.

ಆಗ ಅವನ ಹೆಂಡತಿ, "ನೀವು ಇತರರಿಗಾಗಿ ಪ್ರಾರ್ಥನೆ ಮಾಡಿ ಅವರ ಸಮಸ್ಯೆಗಳನ್ನು ತೀರಿಸುವಿರಷ್ಟೆ ? ಅದಕ್ಕೆ ಅವರ ಕೈಯಿಂದ ಪ್ರತಿಫಲ ಕೇಳಿರಿ. ಅವರು ಕೊಡುವ ಪ್ರತಿಫಲದಿಂದ ನಮ್ಮ ಸಂಪತ್ತು ಹೆಚ್ಚುತ್ತದೆ" ಎಂದು ಸಲಹೆ ಮಾಡಿದಳು.

ಪೂರ್ಣಚಂದ್ರನು ಹಾಗೆಯೇ ಜನರಿಂದ ಪ್ರತಿಫಲ ಕೇಳತೊಡಗಿದನು. ಆ ಕ್ಷಣದಿಂದ ಅವನ ಪ್ರಾರ್ಥನೆಗಳು ಫಲಿಸುವುದು ನಿಂತುಹೋಯಿತು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ಆಲಯದಲ್ಲಿ ಪೂರ್ಣಚಂದ್ರನಿಂದ ಬಂದ ಒಳ್ಳೆಯ ಫಲಿತಗಳು ಕಾಕತಾಳೀಯವಾಗಿ ನಡೆಯಿತೆಂಬುದರಲ್ಲಿ ಸಂಶಯವೇನಿಲ್ಲವಷ್ಟೆ ? ಹಾಗಿಲ್ಲದಿದ್ದರೆ ಅವನು ತಾನು ದೇಶಕ್ಕೆ ರಾಜನಾಗಬೇಕೆಂದು ಕೇಳಿದಾಗ ಅದು ಕೂಡಾ ಫಲಿಸಬೇಕಿತ್ತು. ಆದರೆ ಅದೇನೂ ಫಲಿಸಲಿಲ್ಲ. ಆಮೇಲಿನ ಅವನ ಪ್ರಾರ್ಥನೆಗಳೂ ಫಲಿಸಲಿಲ್ಲ. ಭಗವಂತನಿರುವನೆಂಬುದಕ್ಕೆ ನಿದರ್ಶನ ತೋರಿಸುವೆನೆಂದು ಯೋಗಿ ಅವನನ್ನು ಅಪಮಾರ್ಗ ಹಿಡಿಸಿ ಮೋಸಪಡಿಸಿದನೆಂಬ ಮಾತು ನಿಜವೋ ಅಲ್ಲವೋ ? ಇದಕ್ಕೆ ತಕ್ಕ ಉತ್ತರ ಗೊತ್ತಿದ್ದೂ ಹೇಳದೆ ಹೋದರೆ ನಿನ್ನ ತಲೆ ನುಚ್ಚುನೂರಾಗುವುದು ಖಂಡಿತ !" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಪ್ರಥಮದಲ್ಲಿ ಪೂರ್ಣಚಂದ್ರನು ಆಲಯಕ್ಕೆ ಹೋಗಿ ಮಾಡಿದ ಪ್ರಾರ್ಥನೆಯ ಫಲಿತಗಳು ಕಾಕತಾಳೀಯವಾಗಿ ನಡೆದುದೇನಲ್ಲ. ಆದರೆ ಅವನು ಸ್ವಾರ್ಥ ಬುದ್ಧಿಯಿಂದ ತಾನು ರಾಜನಾಗಬೇಕೆಂದು ಕೇಳಿಕೊಂಡ ಕ್ಷಣದಿಂದ ಅವನ ಪ್ರಾರ್ಥನೆಗೆ ಬೆಲೆಯಿಲ್ಲದೆ ಹೋಯಿತು. ದೇವರ ಮಹಿಮೆಗಳು ನಿದರ್ಶನಗಳಿಗೇ ಹೊರತು ಸ್ವಪ್ರಯೋಜನಕ್ಕೆ ಉಪಯೋಗವಾಗದು. ಸ್ವಾರ್ಥ ಬುದ್ಧಿಯಿಂದ ಪ್ರವರ್ತಿಸುವವನಿಗೆ ಭಗವಂತನು ಸಹಾಯ ಮಾಡಲಾರನು. ನಿಸ್ವಾರ್ಥ ಬುದ್ಧಿಯಿಂದ ಪೂರ್ಣಚಂದ್ರನು ಪ್ರಾರ್ಥಿಸಿದ ಕೋರಿಕೆಗಳೇ ಫಲಿಸಿ, ಯೋಗಿ ಹೇಳಿದಂತೆ ದೇವರಿರುವುದಕ್ಕೆ ನಿದರ್ಶನವಾಗಿದೆ. ಆದುದರಿಂದ ಯೋಗಿ ಪೂರ್ಣಚಂದ್ರನನ್ನು ಮೋಸಪಡಿಸಲೂ ಇಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆ ಸೇರಿ ನೇತಾಡತೊಡಗಿತು.





# ಮಾಮೂಲು

ಕರಣಿಕ ಭೀಮರಾಜನೆಂದರೆ ಅಗ್ರಹಾರದಲ್ಲಿರುವವರಿಗೆಲ್ಲಾ ಬಹಳ ಭಯ. ದೊಡ್ಡ ದೊಡ್ಡ ಉದ್ಯೋಗಸ್ಥರು ಕೂಡಾ ಭೀಮರಾಜ ಕರಣಿಕನೆಂದರೆ ಬೆಚ್ಚಿಬೀಳುತ್ತಾರೆ. ಅದು ಹೇಗೋ ಅವನು ಅಷ್ಟು ದೊಡ್ಡ ಕೀರ್ತಿಗೆ ಭಾಜನನಾಗಿಬಿಟ್ಟಿದ್ದನು.

ಆ ಊರಿಗೆ ಒಂದು ಸಾರಿ ಒಬ್ಬ ದೊಡ್ಡ ಜ್ಯೋತಿಷ್ಯನು ಬಂದನು. ಊರೊಳಗಿರುವ ದೊಡ್ಡ ದೊಡ್ಡವರಿಗೆಲ್ಲಾ ಅವನು ಜಾತಕಗಳನ್ನು ನೋಡಿಯೂ, ಹಸ್ತಸಾಮುದ್ರಿಕೆಗಳನ್ನು ಪರೀಕ್ಷಿಸಿಯೂ ಜ್ಯೋತಿಷ್ಯ ಹೇಳಿ ಏನೇನೋ ಬಹುಮಾನಗಳನ್ನು ಗಳಿಸಿಕೊಳ್ಳುತ್ತಿದ್ದನು. ಆಮೇಲೆ ಒಂದು ದಿನ ಊರೊಳಗಿನ ಪ್ರಮುಖನಾದ ಕರಣಿಕ ಭೀಮರಾಜನ ಬಳಿಗೆ ಬಂದನು ಆ ಜ್ಯೋತಿಷ್ಯ.

"ದಯಮಾಡಿ! ದಯಮಾಡಿ!" ಎಂದು ಒಂದು ಬಗೆಯ ಠೀವಿಯಿಂದ ಕರಣಿಕ ಭೀಮರಾಜನು ಕೈಯಲ್ಲಿದ್ದ ಲೇಖನಿಯನ್ನು ಕೆಳಗಿಟ್ಟು ಜ್ಯೋತಿಷ್ಯನನ್ನು ಸ್ವಾಗತ ಮಾಡಿದನು. ಕುಶಲ ಪ್ರಶ್ನೆಗಳಾದುವು. ಜ್ಯೋತಿಷ್ಯನು ತಾನು ಬಂದ ಕೆಲಸವನ್ನು ಹೇಳಿ, ಕರಣಿಕನ ಹಸ್ತವನ್ನು ಎತ್ತಿಕೊಂಡು ಅಪರಿಮಿತವಾದ ಆಸಕ್ತಿಯಿಂದ ಪ್ರಾರಂಭ ಮಾಡಿದನು.

"ಆಹ! ನಿಮ್ಮದು ಭಲೇ ಜಾತಕ! ಶನಿ ಏಳರಲ್ಲಿ ಪ್ರವೇಶಿಸಿದ್ದರಿಂದ ತಾವು ಪ್ರಭುಗಳಾಗಿರುವಿರಿ. ಸಾರ್ವಭೌಮ ಪದವಿ ಅಲಂಕರಿಸಬೇಕಾದ ದಿವ್ಯ ರೇಖೆಗಳ ಹಸ್ತವಿದು. ಆದುದರಿಂದಲೇ ಈ ಗ್ರಾಮಕ್ಕೆ ನೀವು ಮಕುಟವಿಲ್ಲದ ಚಕ್ರವರ್ತಿಗಳಾಗಿದ್ದೀರಿ!" ಎಂದು ಹೇಳಿದನು ಜ್ಯೋತಿಷ್ಯ.

ನೋಡುವುದೆಲ್ಲಾ ಆದ ಮೇಲೆ, "ಸರಿ ಸರಿ. ಹಸ್ತರೇಖಾ ಸಾಮುದ್ರಿಕೆ ನೋಡಿದ್ದಕ್ಕೆ ನಿಮ್ಮ ಮಾಮೂಲು ಎಷ್ಟು?" ಎಂದು ಕರಣಿಕ ಭೀಮರಾಜನು ಕೇಳಿದ.

"ಅದಕ್ಕೇನಿದೆ ಬಿಡೀ! ಯಾರ ಸಂತೋಷವೆಷ್ಟೋ ಅಷ್ಟು ಕೊಡುತ್ತಾರೆ. ಇಲ್ಲದವರು ಕೂಡಾ ನಾಲ್ಕು ರೂಪಾಯಿಗಿಂತ ಕಡಿಮೆಯಿಲ್ಲದಂತೆ ಕೊಟ್ಟಿದ್ದಾರೆ. ನೀವು ಧರ್ಮಪ್ರಭುಗಳು. ಗ್ರಾಮಕ್ಕೆ ಮಹಾರಾಜರು. ಗ್ರಾಮದವರ ಕೀಲಿ ಕೈಗಳೆಲ್ಲಾ ನಿಮ್ಮ ಹತ್ತಿರ ಇದ್ದಹಾಗೆ ತಾನೆ? ನಿಮ್ಮ ಹತ್ತಿರ ಅಷ್ಟು ಇಷ್ಟು ಅಂತ ಚೌಕಾಸಿ ಮಾಡುವುದುಂಟೆ?" ಎಂದನು ಜ್ಯೋತಿಷ್ಯ.

"ಮತ್ತೆ, ಊರೊಳಗಿರುವ ಪಟೇಲರು, ಶಾನುಭೋಗರು, ದೊಡ್ಡ ದೊರೆ ನಮ್ಮ ಗುರ್ಕಾರರು, ಸಾವುಕಾರ ಶೀನಯ್ಯನವರು ಎಲ್ಲಾ ಇದ್ದಾರಲ್ಲಾ ? ಅವರನ್ನು ನೋಡಿದಿರಾ ?" ಎಂದನು ಕರಣಿಕ ಭೀಮರಾಜ.

"ಕ್ಷಮಿಸಿ, ಮೊದಲು ಅವರನ್ನೆಲ್ಲಾ ನೋಡಿಯೇ ಬಂದಿದ್ದೇನೆ. ಬರುವ ದಾರಿಯಲ್ಲೇ ಅವರೆಲ್ಲ ಇದ್ದರಲ್ಲಾ ?" ಎಂದನು ಜ್ಯೋತಿಷ್ಯ.

"ಸರಿ. ನಿಮ್ಮ ಮಾಮೂಲು ಎಷ್ಟು ಅಂತ ಹೇಳಿಬಿಡಿರೇನು ?" ಎಂದು ಪುನಃ ಪ್ರಶ್ನಿಸಿದನು ಭೀಮರಾಜ.

"ಅಯ್ಯಾ, ನಾನು ಒಂದು ಒಂದೂವರೆ ತಿಂಗಳಿಂದ ಈ ಅಗ್ರಹಾರದ ಸುತ್ತುಪಕ್ಕದಲ್ಲೇ ಸಂಚಾರ ಮಾಡಿಕೊಂಡಿದ್ದೇನೆ. ನಿಜಕ್ಕೂ ಈ ಸುತ್ತುಮುತ್ತಿನ ಗ್ರಾಮಗಳೆಲ್ಲಾ ಲಕ್ಷ್ಮಿಯ ನಿವಾಸ ಸ್ಥಾನಗಳೇ. ಅದರಲ್ಲೂ ಈ ಗ್ರಾಮದ ಆದರಣೆ ತುಂಬ ಹೆಚ್ಚು. ವಿದ್ಯೆಗಳನ್ನು ಪೋಷಿಸುವಂತಹ ಮಹಾ ದಾತರೆಲ್ಲಾ ಇಲ್ಲಿಯೇ ಇದ್ದಾರೆ" ಎಂದನು ಜ್ಯೋತಿಷ್ಯ.

"ಅದೇ ನೋಡಿ. ನಿಮಗೆ ಹತ್ತು ನಾಣ್ಯ ಸಿಕ್ಕುವಂತಾಗುವುದೇ ನನಗೆ ಸಂತೋಷ. ನಮ್ಮ ಗ್ರಾಮಕ್ಕೆ ನಿಮ್ಮಂಥ ವಿದ್ವಾಂಸರಾರಾದರೂ ಬಂದರೆಂದರೆ ಪ್ರೋತ್ಸಾಹ ಕೊಡಬೇಕಷ್ಟೆ ? ಚೆನ್ನಾಗಿ ಸಂಪಾದನೆಯಾಗಿದೆಯಷ್ಟೆ ?" ಎಂದನು ಕರಣಿಕ ಭೀಮರಾಜ.

ಜ್ಯೋತಿಷ್ಯನು ಸಂತೋಷದಿಂದ ಉಬ್ಬಿ, "ಮುಚ್ಚುಮರೆ ಏಕೆ ಹೇಳಿ ? ಸುಮಾರು ಇನ್ನೂರರ ವರೆಗೆ ವಸೂಲಾಯಿತೆನ್ನಿ" ಎಂದನು.

ಭೀಮರಾಜನು ಮುಗುಳುನಗು ನಗುತ್ತ, "ಭೇಷ್ ! ಹುಂ. ಹಾಗೆ ಸತ್ಯಸಂಗತಿ ಹೊರಗೆ ಬರಬೇಕೆಂತಲೇ ಇದ್ದೆ. ಹಾಗಾದರೆ ನೀವು ಹೇಳಿದ ಮೊತ್ತದ ಮೇಲೆ, ರೂಪಾಯಿಗೆ ಐದು ದಮ್ಮಿಡಿಗಳ ಹಾಗೆ ಕರಣಿಕನ ಮಾಮೂಲನ್ನು ಮೊದಲು ಜಮೆ ಕಟ್ಟಿರಿ. ಅದು ಐದು ರೂಪಾಯಿ ಒಂದು ಪಾವಲಿಯಾಗುತ್ತದೆ. ಈ ಮಾಮೂಲನ್ನು ಕಟ್ಟಬೇಕೆಂಬುದು ಸಣ್ಣ ಹುಡುಗನಿಗೂ ಗೊತ್ತಿರುತ್ತದೆ. ಇದರಲ್ಲಿ ನಿಮ್ಮ ಮಾಮೂಲು ನಾಲ್ಕು ರೂಪಾಯಿ ಕಳೆದೇ ಕೊಟ್ಟುಬಿಡಿರಿ. ಅಲ್ಲಿಗೆ ನಮ್ಮ ನಿಮ್ಮ ಲೆಕ್ಕ ತೀರಿಹೋಗುತ್ತದೆ" ಎಂದನು.

ಜ್ಯೋತಿಷ್ಯನು ಗಾಬರಿಬಿದ್ದನು. ಈ ಕರಣಿಕನ ಹತ್ತಿರ ಇನ್ನೂ ಸ್ವಲ್ಪಹೊತ್ತು ಕುಳಿತರೆ ಇನ್ನೇನು ಗಂಡಾಂತರ ಬರುತ್ತದೋ ಎಂದು ಹೆದರಿ ಒಂದೂಕಾಲು ರೂಪಾಯಿಯನ್ನು ಕಟ್ಟಿ, ಮಾತಾಡದೆ ಅಲ್ಲಿಂದ ಹೊರಟುಹೋದನು.







**ನಮ್ಮ ದೇವಾಲಯಗಳು:**

## ಕೋಣಾರ್ಕ

ಚಂದ್ರಭಾಗಾನದಿ ಸಮುದ್ರದಲ್ಲಿ ಸಂಗಮಿಸುವ ಸ್ಥಳದಲ್ಲಿ ಬೆಳಗುವ ಸೂರ್ಯ ದೇವಾಲಯವು ಸುಪ್ರಸಿದ್ಧವಾಗಿದೆ. ಶ್ರೀ ಕೃಷ್ಣನ ಕುಮಾರನಾದ ಸಾಂಬನು ಸೂರ್ಯಭಗವಾನನನ್ನು ಧ್ಯಾನಿಸುತ್ತ, ಇಲ್ಲಿ ಅನೇಕ ವರ್ಷಗಳವರೆಗೆ ಇದ್ದನೆಂದು ಪುರಾಣಗಳು ಹೇಳುತ್ತವೆ.

ಹದಿಮೂರನೇ ಶತಮಾನದಲ್ಲಿ ಕಳಿಂಗ ರಾಜ್ಯವನ್ನು ಪರಿಪಾಲಿಸಿದ ನರಸಿಂಹದೇವನೆಂಬ ರಾಜನು ಈ ಸುಂದರ ಪ್ರದೇಶವನ್ನು ಸಂದರ್ಶಿಸಿ, ಅಲ್ಲಿ ಸೂರ್ಯ ದೇವಾಲಯವನ್ನು ನಿರ್ಮಿಸಬೇಕೆಂದು ಸಂಕಲ್ಪಿಸಿಕೊಂಡನು. ಅದಕ್ಕಾಗಿ ತನ್ನ ರಾಜ್ಯದೊಳಗಿನ ಹನ್ನೆರಡು ಸಾವಿರ ಮಂದಿ ಶಿಲ್ಪಿಗಳನ್ನು ಬರಮಾಡಿಸಿದನು.





ದೊಡ್ಡ ಶಿಲ್ಪಕಾರನೂ, ವಾಸ್ತು ಶಾಸ್ತ್ರಜ್ಞನೂ ಆದ ವಿಷ್ಣುಮೋಹರಾಣಾನ ನಾಯಕತ್ವದಲ್ಲಿ ಆಲಯ ನಿರ್ಮಾಣವು ಪ್ರಾರಂಭವಾಯಿತು. ದೂರ ದೂರ ಪ್ರಾಂತಗಳಿಂದ ದೊಡ್ಡ ದೊಡ್ಡ ಬಂಡೆಗಳೂ ಕಲ್ಲುಗಳೂ ಅಲ್ಲಿಗೆ ಸಾಗಿಸಲ್ಪಟ್ಟವು. ಶಿಲ್ಪ ಕಲೆಯಲ್ಲಿ ಪ್ರತ್ಯೇಕ ಸ್ಥಾನ ಅಲಂಕರಿಸಿರುವ ಆ ದೇವಾಲಯದ ನಿರ್ಮಾಣವನ್ನು ಸಕಾಲದಲ್ಲಿ ಪೂರ್ತಿಗೊಳಿಸಲು ಶಿಲ್ಪಿಗಳು ರಾತ್ರಿ ಹಗಲೂ ಕೆಲಸ ಮಾಡತೊಡಗಿದರು.



ಸೂರ್ಯಭಗವಾನನ ರಥದ ಹೋಲಿಕೆಯಲ್ಲಿ, ಬ್ರಹ್ಮಾಂಡವಾದ ಚಕ್ರಗಳಿಂದ ದೊಡ್ಡ ಕುದುರೆಗಳನ್ನು ಹೂಡಿದ ವಿಧದಲ್ಲಿ ಆಲಯ ನಿರ್ಮಾಣವು ಪೂರ್ತಿಯಾಗುತ್ತ ಬಂದಿತು. ವರ್ಷದುದ್ದಕ್ಕೂ ಸೂರ್ಯಕಿರಣಗಳು ದೇವಾಲಯಕ್ಕೆ ಬೀಳುವ ರೀತಿಯಲ್ಲಿ ಗುಡಿ ಈಶಾನ್ಯಾಭಿಮುಖವಾಗಿ ನಿರ್ಮಿಸಲ್ಪಟ್ಟಿತ್ತು.

ಶಿಲ್ಪಿ ವಿಷ್ಣುಮೋಹರಾಣನಿಗೆ ಸ್ವಂತ ಗ್ರಾಮದಲ್ಲಿ ಹದಿನಾಲ್ಕು ವಯಸ್ಸಿನ ಧರ್ಮಪಾದನೆಂಬ ಮಗನಿದ್ದನು. ಅವನು ತಾಯಿಯ ಬಳಿಯಲ್ಲಿ ಬೆಳೆಯುತ್ತ, ಶಿಲ್ಪ ಶಾಸ್ತ್ರಕ್ಕೆ ಸಂಬಂಧಿಸಿದ, ತಂದೆಯ ತಾಳಪತ್ರ ಗ್ರಂಥಗಳನ್ನು ಬಹಳ ಶ್ರದ್ಧೆಯಿಂದ ಪಠಿಸುತ್ತಿದ್ದನು. ಒಂದು ದಿನ ಧರ್ಮಪಾದನಿಗೆ ತಂದೆಯನ್ನು ನೋಡಬೇಕೆಂಬ ಆಸೆಯಾಗಿ, ತಾಯಿಯ ಅನುಮತಿ ಪಡೆದು, ಕೋಣಾರ್ಕಕ್ಕೆ ಹೊರಟನು.





ಧರ್ಮಪಾದನು ಕಾಲ್ನಡಿಗೆಯಿಂದಲೇ ಕೋಣಾರ್ಕವನ್ನು ತಲುಪಿದನು. ಮಗನನ್ನು ನೋಡಿದ ಕೂಡಲೇ ತಂದೆ ಅತ್ಯಾನಂದದಿಂದ ಆಲಿಂಗಿಸಿಕೊಂಡನು. ಅದ್ಭುತವಾದ ಶಿಲ್ಪ ಕಲಾ ಮಂದಿರವನ್ನು ನೋಡಿ ಧರ್ಮಪಾದನಿಗೆ ಆನಂದಾಶ್ಚರ್ಯಗಳು ಒಟ್ಟಿಗೇ ಆಯಿತು.

ಆಲಯ ನಿರ್ಮಾಣವು ಪೂರ್ತಿಯಾಯಿತೆಂದು ಯಾರೂ ಸಂತೋಷಪಡಲಿಲ್ಲ. ಅದರ ಬದಲಿಗೆ ಶಿಲ್ಪಿಗಳೆಲ್ಲರೂ ವಿಷಾದದ ಮುಖದಲ್ಲಿರುವುದನ್ನು ನೋಡಿ, ಧರ್ಮಪಾದನು ಕಾರಣವೇನೆಂದು ಕೇಳಿದನು. ಗೋಪುರಶಿಖರವನ್ನು ಕ್ರಮ ತಪ್ಪದೆ ಕೂಡಿಸುವುದರಲ್ಲಿ ಶಿಲ್ಪಿಗಳು ಮರೆತಿರುವರೆಂದೂ, ಅದಕ್ಕೇ ಎಲ್ಲರೂ ಚಿಂತಿಸುತ್ತಿರುವರೆಂದೂ ಶಿಲ್ಪಿಗಳಿಂದ ತಿಳಿಯಿತು.





ಆಲಯವು ಪೂರ್ತಿಯಾಗುವುದರಲ್ಲಿ ಕಾಣುವ ಆಲಸ್ಯವನ್ನು ನೋಡಿ ರಾಜನು ಸಹನೆ ಕಳೆದುಕೊಂಡು, ಮರುದಿನ ಬೆಳಗಾಗುವಷ್ಟರಲ್ಲಿ ಗೋಪುರ ಕಲಶದ ಕೆಲಸ ಮುಗಿಸದೆ ಹೋದರೆ ಶಿಲ್ಪಿಗಳೆಲ್ಲರನ್ನೂ ಕೊಲ್ಲಿಸುವೆನೆಂದು ಎಚ್ಚರಿಕೆ ಕೊಟ್ಟನು. ಧರ್ಮಪಾದನು ಆಲಯದ ಗೋಪುರವನ್ನು ಏರಿ ಅಲ್ಲಿಯ ಕಟ್ಟಡವನ್ನು ಪರಿಶೀಲಿಸಿದನು. ಗೋಪುರದ ಕಲಶವನ್ನು ಹೇಗೆ ಅಳವಡಿಸಿಡಬೇಕೆಂಬುದನ್ನು ಶಿಲ್ಪಿಗಳಿಗೆ ತಿಳಿಯುವಂತೆ ಹೇಳಿದನು.

ಧರ್ಮಪಾದನ ಸಾಹಸಕ್ಕೆ, ಜ್ಞಾನಕ್ಕೆ ಶಿಲ್ಪಿಗಳೆಲ್ಲಾ ಮೆಚ್ಚಿಕೊಂಡರು. ತನ್ನ ಮಗನ ಸಾಮರ್ಥ್ಯ ನೋಡಿ ತಂದೆಗೆ ಪರಮಾನಂದವಾಯಿತು. ಆದರೂ ಅಸೂಯಾಪರರಾದ ಕೆಲವು ಶಿಲ್ಪಿಗಳು "ಹನ್ನೆರಡು ಸಾವಿರ ಮಂದಿ ಶಿಲ್ಪಿಗಳಿಂದಾಗದ ಕೆಲಸವನ್ನು ಒಬ್ಬ ಹುಡುಗನು ಮಾಡುವುದು ನಮಗೆಲ್ಲಾ ಅವಮಾನದ ವಿಷಯವಲ್ಲವೇ ?" ಎಂದು ಗುಸುಗುಸು ಹೇಳಿಕೊಂಡರು. ಅದನ್ನು ಕೇಳಿ ಧರ್ಮಪಾದನು ವಿಭ್ರಾಂತನಾದನು !





ತಾನು ಅಲ್ಲಿಂದ ಶಾಶ್ವತವಾಗಿ ಹೊರಟು ಹೋದರೆ ಆ ಕೆಲಸ ತಾನು ಮಾಡಿದನೆಂದು ಯಾರಿಗೂ ತಿಳಿಯದೆ ಹೋಗುತ್ತದೆಂದು ಧರ್ಮಪಾದನು ಅಂದುಕೊಂಡನು. ಅರ್ಧ ರಾತ್ರಿಯ ಹೊತ್ತಿನಲ್ಲಿ ಗೋಪುರದ ಮೇಲೆ ಹತ್ತಿದನು. ಆ ದಿನ ಹುಣ್ಣಿಮೆಯ ರಾತ್ರಿ ಯಾದುದರಿಂದ ಸಮುದ್ರ ಜಲವೂ, ನದೀ ಜಲವೂ ತುಂಬ ಎತ್ತರಕ್ಕೆ ತೆರೆಗಳನ್ನೆಬ್ಬಿಸಿ ಆಲಯದ ಪ್ರಾಂಗಣವನ್ನು ತಾಗುತ್ತಿದ್ದುವು. ಧರ್ಮಪಾದನು ಶಿಖರಾಗ್ರದಿಂದ ಸಮುದ್ರಕ್ಕೆ ಹಾರಿ ಪ್ರಾಣಾರ್ಪಣೆ ಮಾಡಿದನು !

ಯುಗಗಳು ಕಳೆದರೂ ಧರ್ಮಪಾದನ ಸಾಹಸವು ಚರಿತ್ರೆಯಲ್ಲಿ ಶಾಶ್ವತವಾಗಿ ನಿಂತುಹೋಯಿತು. ಪ್ರಧಾನ ಆಲಯವು ಈಗ ಇಲ್ಲದಿದ್ದರೂ, ಮುಖಶಾಲೆಯ ಗೋಡೆಯ ಮೇಲೆ ಸೂರ್ಯ ಭಗವಾನನ ಸುಂದರ ಶಿಲ್ಪಗಳು ನೋಡುವವರಿಗೆ ಆನಂದವನ್ನುಂಟುಮಾಡುತ್ತವೆ.






ಕೋಣಾರ್ಕ ದೇವಾಲಯದ ಮುಖಶಾಲೆಯ ಗೋಡೆಯ ಶಿಲ್ಪಗಳು, ಕಲಾಖಂಡಗಳು ತುಂಬಾ ವಿಲಕ್ಷಣವಾದುವು. ಪ್ರಸ್ತುತ ಚಂದ್ರಭಾಗ ನದಿಯೂ, ಸಮುದ್ರವೂ ಆಲಯಕ್ಕೆ ದೂರವಾದರೂ ದೇವಾಲಯ ಪ್ರಾಂತವು ಇನ್ನೂ ಅತ್ಯಂತ ಗಂಭೀರವಾಗಿ ಕಂಗೊಳಿಸಿಕೊಂಡಿದೆ.



# ದಕ್ಕಿದ ಹಣ

ಒಂದು ಊರಿನಲ್ಲಿ ಪರಾಜಿತನೆಂಬ ಸಣ್ಣ ರೈತನೊಬ್ಬನಿದ್ದ. ಅವನು ತನ್ನ ಮಗಳ ಮದುವೆಯ ಖರ್ಚಿಗಾಗಿ ತನಗಿರುವ ಎರಡು ಎಕರೆ ಹೊಲಗಳನ್ನು ಮಾರಿ ಹತ್ತು ಸಾವಿರ ರೂಪಾಯಿಗಳನ್ನು ಮನೆಯೊಳಗೆ ಭದ್ರವಾಗಿಟ್ಟುಕೊಂಡಿದ್ದನು. ಹಾಗೆ ಅವನು ಹಣವನ್ನು ಭದ್ರವಾಗಿ ಇಡುತ್ತಿದ್ದಾಗ ಅವನ ದೂರದ ಬಂಧುವೊಬ್ಬನು ಅಲ್ಲಿಯೇ ಇದ್ದನು. ಸ್ವಲ್ಪಹೊತ್ತಿನ ಮೇಲೆ ಪರಾಜಿತನು ಏನೋ ಕೆಲಸದ ಮೇಲೆ ಎಲ್ಲಿಗೋ ಹೊರಗೆ ಹೋದನು. ಆ ಸಮಯದಲ್ಲಿ ಅವನ ಹೆಂಡತಿ ಹೊರಗೆ ಮನೆಯ ಹಿಂದೆ ಏನೋ ಕೆಲಸದಲ್ಲಿದ್ದಳು. ಈ ಸಂಧಿಯನ್ನು ಸಾಧಿಸಿ ಆ ಬಂಧು ಮನುಷ್ಯನು ಮನೆಯೊಳಗಿದ್ದ ಹಣವನ್ನು ಅಪಹರಿಸಿಕೊಂಡು ತನ್ನ ಮನೆಗೆ ಹೋಗಿಬಿಟ್ಟನು.

ಆ ಬಂಧುವಿನ ಹೆಸರು ಸಾಂಬಯ್ಯ. ಅವನಿಗೆ ಮದುವೆಯ ವಯಸ್ಸಿಗೆ ಬಂದ ಮಗಳಿದ್ದಳು. ಬರಲಿರುವ ಅಳಿಯನಿಗೆ ತೃಪ್ತಿಯಾಗುವಷ್ಟು ಕೊಡಲು ಸಾಧ್ಯವಿಲ್ಲದೆ ಅವನು ಚಡಪಡಿಸಿಕೊಂಡಿದ್ದನು. ಅವನು ನಿಶ್ಚಯಿಸಿದ ಅಳಿಯ ಆ ಊರಿನಲ್ಲಿರುವ ಸೋಮಯ್ಯನೆಂಬವನ ಮಗ. ಈಗ ಹಣ ಸಿಕ್ಕಿದ ಕೂಡಲೇ ಆ ಸಂಬಂಧವನ್ನು ಸ್ಥಿರಪಡಿಸಿಕೊಂಡು ಬರಲು ಸಾಂಬಯ್ಯನು ಕೂಡಲೇ ಸೋಮಯ್ಯನ ಮನೆಗೆ ಹೊರಟನು.

ಹೊರಡುವ ಮೊದಲು ಸಾಂಬಯ್ಯನು ಅಪಹರಿಸಿ ತಂದ ಹಣವನ್ನು ಅಟ್ಟದ ಮೇಲೆ ಹಳೇ ಸಾಮಾನುಗಳ ನಡುವಿನಲ್ಲಿ ಇಟ್ಟಿದ್ದನು.

ಹಾಗೆ ಅವನು ಅಟ್ಟದ ಮೇಲೆ ಚಿಕ್ಕದೊಂದು ಚೀಲದೊಂದಿಗೆ ಹೋಗುವುದನ್ನು ಅವನ ಸಣ್ಣ ಮಗನಾದ ಭದ್ರಯ್ಯನು ನೋಡಿದನು. ತಂದೆ ಹೊರಗೆ ಹೋದ ಕೂಡಲೇ ಭದ್ರಯ್ಯ ಅಟ್ಟದ ಮೇಲೆ ಹತ್ತಿ, ಅಲ್ಲಿದ್ದ ಹಣದ ಚೀಲವನ್ನು ಎತ್ತಿಕೊಂಡನು. ಅವನಿಗೆ ಊರೊಳಗೆ ಅವನ ಹಾಗೆ ತಿರುಗುವ ಹುಡುಗರು ನಾಲ್ಕೈದು ಮಂದಿ ಮಿತ್ರರಿದ್ದರು. ಅವನು ಹಣದ ಚೀಲವನ್ನು ಸೊಂಟದಲ್ಲಿ ತುರುಕಿಕೊಂಡು ಅವರ ಮನೆಗೆ ಹೋದನು.

ಹುಡುಗ ಭದ್ರಯ್ಯ ಹಿಡಿಸಲಾರದಷ್ಟು ಸಂತೋಷದಿಂದ ಬೀದಿಯಲ್ಲಿ ಹೋಗುತ್ತಿರುವಾಗ ಅವನ ಸೊಂಟದಲ್ಲಿರುವ ಹಣದ ಚೀಲ ದಾರಿಯಲ್ಲಿ ಬಿದ್ದು

ಬಿ. ಎ. ರಾವ್



ಹೋಯಿತು. ಹಾಡುತ್ತಾ ಕುಣಿಯುವ ಉತ್ಸಾಹದಲ್ಲಿ ಅದು ಬಿದ್ದುದು ಅವನಿಗೆ ಗೊತ್ತಾಗಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಆ ದಾರಿಯಲ್ಲಿ ಗಾಡಿಯಲ್ಲಿ ಸರಕುಗಳನ್ನು ತುಂಬಿಸಿಕೊಂಡು ಬರುವ ಆ ಊರಿನ ಸಾಹುಕಾರ ಬಂಗಾರಯ್ಯ ಅದನ್ನು ನೋಡಿದನು.

ಅವನು ಗಾಡಿಯಿಂದಿಳಿದು ಆ ಚೀಲವನ್ನು ಎತ್ತಿಕೊಂಡು ಗಾಡಿಯಲ್ಲಿ ಹಾಕಿ ಮತ್ತೆ ಗಾಡಿ ಏರಿದನು. ಆ ಚೀಲದಲ್ಲಿ ಏನೋ ಹಣವಿರುವ ಹಾಗೆ ಅವನಿಗೆ ಅನುಮಾನವಾಯಿತು. ಆದರೆ ಆಗಲೇ ಅದನ್ನು ಬಿಚ್ಚಿದರೆ, ಅದನ್ನು ಕಳೆದುಕೊಂಡವರಾರಾದರೂ ಹುಡುಕುತ್ತಾ ಬರುವರೇನೋ ಎಂದು ಸಂದೇಹವಾಯಿತು ಅವನಿಗೆ.

ಅವನು ತನ್ನ ಅಂಗಡಿಯವರೆಗೆ ಹೋಗಿ ತಲಪಿದ ಮೇಲೆ ಗಾಡಿಯಲ್ಲಿದ್ದ ಸರಕುಗಳನ್ನು ಆಳಿನ ಮೂಲಕ ಎತ್ತಿ ಒಳಗಿಡುವ ಗಡಿಬಿಡಿಯಲ್ಲಿ ಆ ಚೀಲದ ಮಾತು ಮರೆತುಬಿಟ್ಟನು. ಸ್ವಲ್ಪ ಹೊತ್ತಿನ ಮೇಲೆ ಅದರ ನೆನಪು ಬಂದು, ಅದಕ್ಕಾಗಿ ಹುಡುಕಾಡಿದನು. ಸರಕುಗಳ ಚೀಲಗಳ ನಡುವೆ ಆ ಚಿಕ್ಕ ಚೀಲ ಕಾಣಲೇ ಇಲ್ಲ.

ಸರಕುಗಳನ್ನೆಲ್ಲ ಎತ್ತಿ ಒಳಗಿಡುವ ಬಂಗಾರಯ್ಯನ ಕೆಲಸದಾಳಿಗೆ ಆ ಚೀಲ ಕಾಣಿಸಿತ್ತು. ಅವನು ಅದನ್ನು ತನ್ನ ದುಸ್ತಿನೊಳಗೆ ಅಡಗಿಸಿಟ್ಟು ಕೆಲಸ ಮುಗಿದ ಮೇಲೆ ಮನೆಗೆ ಹೋಗಿಬಿಟ್ಟನು, ಮನೆಯಲ್ಲಿ ಆ ಚೀಲ ಬಿಚ್ಚಿ ನೋಡಿದನು. ಅದರಲ್ಲಿದ್ದ ಹಣವನ್ನು ನೋಡಿ ಅವನ ಹೆಂಡತಿಗೆ ಸಂತೋಷದಿಂದ ಮೂರ್ಛೆ ಬರುವಷ್ಟರವರೆಗಾಯಿತು.

"ಇಷ್ಟು ಹಣ ನಮ್ಮ ಹತ್ತಿರ ಇದೆ ಎಂದು ತಿಳಿದರೆ ನಮ್ಮ ಪ್ರಾಣಕ್ಕೇ ಮುಪ್ಪು ಬಂದೀತು! ಯಾವನೋ ಒಬ್ಬ ಹೇಗೋ ಇದನ್ನು ಕದ್ದುಬಿಡಲು ಪ್ರಯತ್ನಿಸಿಯಾನು. ಇದನ್ನು ಈಗಲೇ ಗುಟ್ಟಾಗಿ ಮನೆ ಹಿಂದೆ ಹುಗಿದಿಟ್ಟುಬಿಡೋಣ" ಎಂದಳು ಅವನ ಹೆಂಡತಿ.

ಅವರು ಅಂದುಕೊಂಡ ಹಾಗೆ ಆಗಲಿಲ್ಲ. ರಾತ್ರಿ ಸದ್ದಡಗಿದ ಮೇಲೆ ಅವರಿಬ್ಬರೂ ಮನೆಯ ಹಿಂಬದಿಯಲ್ಲಿ ಹೊಂಡ ತೆಗೆದು ಹಣವನ್ನು ಹುಗಿದಿಡುವುದನ್ನು, ಪಕ್ಕದ ಮನೆಯ ಶೇಷಯ್ಯನೆಂಬುವನು ನೋಡಿಬಿಟ್ಟನು. ಅವನಿಗೆ ಆ ಚೀಲದಲ್ಲಿ ಯಾವುದೋ ಬೆಲೆ ಬಾಳುವ ವಸ್ತುಗಳಿರುವುದೆಂಬ ಅನುಮಾನವಾಯಿತು. ಕೆಲಸದಾಳು ಮತ್ತು ಅವನ ಹೆಂಡತಿ, ತಮ್ಮ ಹುಗಿಯುವ ಕೆಲಸ ಮುಗಿಸಿ ಮನೆಯೊಳಗೆ ಹೋಗಿ ಬಾಗಿಲು ಹಾಕಿಕೊಂಡ ಮೇಲೆ, ಶೇಷಯ್ಯ ಗೋಡೆ ಹಾರಿ ಈಚೆಗೆ ಬಂದು ಹೊಂಡದ ಮೇಲಿನ ಮಣ್ಣನ್ನು ಮೇಲೆ ಹಾಕಿ, ಸಣ್ಣ ಗಡಿಗೆಯೊಳಗಿದ್ದ ಚೀಲವನ್ನು ಎತ್ತಿಕೊಂಡು, ಮಣ್ಣು ಸರಿಮಾಡಿಟ್ಟು ಗೋಡೆಯನ್ನು ಹಾರಿ ತನ್ನ ಮನೆಗೆ ಹೋದನು.

ಆಗ ಮಧ್ಯ ರಾತ್ರಿಯ ಸಮಯವಾಗಿತ್ತು. ಆ ದಿನ ಶೇಷಯ್ಯನ ಮನೆಗೆ ಕನ್ನ ಹಾಕಲು ಬಂದ

ಒಬ್ಬ ಕಳ್ಳನು ಅಲ್ಲೇ ಹೊಂಚಿಕೊಂಡಿದ್ದು ಶೇಷಯ್ಯ ಮಾಡಿದುದನ್ನೆಲ್ಲಾ ನೋಡಿದನು. ಅವನಿಗೆ ಶೇಷಯ್ಯ ಕೂಡಾ ತನ್ನ ಹಾಗೇ ಒಬ್ಬ ಕಳ್ಳನೆಂದು ಅನುಮಾನವಾಯಿತು. ಕಳ್ಳತನದ ಸೊತ್ತಿನಲ್ಲಿ ಪಾಲು ಕೇಳಬೇಕೆಂದುಕೊಂಡು ಅವನು ಶೇಷಯ್ಯನ ಸಮೀಪಕ್ಕೆ ಬಂದನು. ಶೇಷಯ್ಯ ಅವನನ್ನು ನೋಡಿದ ಕೂಡಲೇ ಕಳ್ಳನೆಂದು ಕೂಗಲು ನೋಡಿ, ತನ್ನ ಕೈಯಲ್ಲಿರುವುದು ಕಳವಿನ ಸೊತ್ತು ಎಂದು ನೆನಪಾಗಿ, ಅದನ್ನು ಅಲ್ಲಿಯೇ ಬಿಸಟು ತನ್ನ ಮನೆಗೆ ಓಡಿಹೋದನು.

ಕಳ್ಳ ತನ್ನ ಅದೃಷ್ಟಕ್ಕೆ ಉಬ್ಬಿಕೊಳ್ಳುತ್ತ ಕೆಳಗೆ ಬಿದ್ದ ಚೀಲವನ್ನು ಎತ್ತಿಕೊಂಡು ಓಡತೊಡಗಿದನು. ಅವನ ದುರದೃಷ್ಟವೂ ಅವನ ಬೆನ್ನು ಹಿಡಿದು ಓಡಿಸಿಕೊಂಡಿತ್ತು. ಕೆಲವು ನಾಯಿಗಳು ಬೊಗಳುತ್ತಾ ಅವನ ಹಿಂದೆಯೇ ಓಡಿದುವು. ಸುತ್ತಮುತ್ತಲಿನ ಮನೆಯವರು ನಿದ್ದೆಯಿಂದ ಎಚ್ಚೆತ್ತು ಏನೋ ಎಂಥದೋ ಎಂದುಕೊಂಡು ಓಡಿಬರತೊಡಗಿದರು. ಅದನ್ನು ನೋಡಿ ತಾನು ಸಿಕ್ಕಿಬೀಳುವೆನೆಂಬ ಭಯ ದಲ್ಲಿ ಕಳ್ಳನು ಹಣದ ಚೀಲವನ್ನು ಬೀದಿಯ ಪಕ್ಕಕ್ಕೆ ಬಿಸಾಡಿಬಿಟ್ಟನು.

ಆ ಊರಿನ ಸಿದ್ಧಾಂತಿ ಪಂಡಿತನು ಬೆಳಂಜಾಮ ದಲ್ಲಿ ಎದ್ದು ಕಾಲುವೆಗೆ ಹೋಗಿ ಸ್ನಾನಮಾಡಿ ಬರುವ ಅಭ್ಯಾಸವಿತ್ತು. ಹಾಗೆ ಅವನು ಸ್ನಾನ ಮಾಡಿ ಮನೆಗೆ ಹಿಂದಿರುಗುತ್ತಿರುವಾಗ ದಾರಿಯ ಬದಿಯಲ್ಲಿ ಬಿದ್ದಿದ್ದ ಹಣದ ಚೀಲ ಅವನ ಕಣ್ಣಿಗೆ ಕಂಡಿತು. ಸಿದ್ಧಾಂತಿ ಅದನ್ನು ಎತ್ತಿಕೊಂಡು, ಅದರಲ್ಲಿ ಹಣವಿರುವುದೆಂದು ಆನಂದಪಡುತ್ತ ಮನೆಗೆ ಮುಟ್ಟುವ ಸಮಯಕ್ಕೆ, ಮನೆಯ ಮುಂದೆ ಕೆಲವು ಮಂದಿ ಗ್ರಾಮಸ್ಥರು ಕುಳಿತುಕೊಂಡಿರುವು ದನ್ನು ನೋಡಿದನು. ಅವರು ಅವನಿಂದ ಏನೋ ಮದುವೆಗೆ ಮುಹೂರ್ತವಿಡಿಸಲು ಬಂದಿದ್ದರು.

ಸಿದ್ಧಾಂತಿ ಅವರನ್ನು ನೋಡಿದ ಕೂಡಲೇ ತುಂಡು ಬೈರಾಸಿನ ಮರೆಯಲ್ಲಿ ಹಣದ ಚೀಲವನ್ನು ಅಡಗಿಸಿಕೊಂಡು ಮನೆಯೊಳಗೆ ಹೋದನು. ಅವನು



ಚೀಲದ ಬೈರಾಸನ್ನು ಉಯ್ಯಾಲೆಯ ಹಲಗೆಯ ಮೇಲಿಟ್ಟು, ಬಂದವರೊಂದಿಗೆ ಮಾತಾಡಲು ಹೊರಗೆ ಹೋದನು. ಸಿದ್ಧಾಂತಿಯ ಹೆಂಡತಿ ಬಟ್ಟೆಗಳನ್ನು ಒಗೆಯಲು ಬಾಲ್ದಿಯೊಳಗೆ ಬಟ್ಟೆಗಳನ್ನಿಟ್ಟುಕೊಂಡು ಹೊರಗೆ ಬರುವಾಗ, ಉಯ್ಯಾಲೆ ಹಲಗೆಯ ಮೇಲಿದ್ದ ಬೈರಾಸು ಕೂಡಾ ಎತ್ತಿ ಬಾಲ್ದಿಗೆ ಹಾಕಿಕೊಂಡಳು. ಬೈರಾಸಿನೊಂದಿಗಿದ್ದ ಹಣದ ಚೀಲ ಅವಳಿಗೆ ಗೊತ್ತಾಗಲಿಲ್ಲ.

ಸಿದ್ಧಾಂತಿಯ ಹೆಂಡತಿ ಕಾಲುವೆಗೆ ಬಟ್ಟೆಗಳನ್ನು ಒಯ್ದಾಗ ಪರಾಜಿತನ ಹೆಂಡತಿ ಕೂಡಾ ಅಲ್ಲಿ ಬಟ್ಟೆಗಳನ್ನು ಒಗೆಯುತ್ತಿದ್ದಳು. ಇಬ್ಬರೂ ಲೋಕಾಭಿರಾಮಾಯಣದ ಮಾತುಗಳನ್ನಾಡುತ್ತ, ತಮ್ಮ ಕೆಲಸ ಮುಗಿಸಿ, ಒಗೆದ ಬಟ್ಟೆಗಳನ್ನು ತೆಗೆದುಕೊಂಡು ತಮ್ಮ ತಮ್ಮ ಮನೆಗಳಿಗೆ ಹೋದರು. ಆದರೆ ಆ ಸಮಯದಲ್ಲಿ ಒಂದು ತಪ್ಪು ನಡೆದು ಹೋಯಿತು. ಒಗೆದ ಬಟ್ಟೆಗಳನ್ನು ಹಾಕಿಕೊಂಡ ಬಿಂದಿಗೆಗಳು ಇಬ್ಬರದೂ ಒಂದೇ ಬಗೆಯಾಗಿದ್ದುವು. ಈ ನಡುವೆ ಸಂತೆಯಲ್ಲಿ ಅವರಿಬ್ಬರೂ ಆ ಬಿಂದಿಗೆಗಳನ್ನು ಕೊಂಡುಕೊಂಡಿದ್ದರು. ಈಗ ಬಿಂದಿಗೆಗಳು ಅದಲು ಬದಲಾಗಿ ಹೋಗಿದ್ದುವು.

ಪರಾಜಿತನ ಹೆಂಡತಿ ಒಗೆದ ಬಟ್ಟೆಗಳನ್ನು ಆರ ಹಾಕಲು ತೆಗೆಯುತ್ತಿದ್ದಾಗ ಬಿಂದಿಗೆಯ ಬುಡದಲ್ಲಿ ಒಂದು ಚೀಲವಿರುವುದು ಕಂಡಿತು. ಅವಳು ಆಶ್ಚರ್ಯಪಡುತ್ತ ಚೀಲದ ಗಂಟನ್ನು ಬಿಚ್ಚಿ ನೋಡಿದಳು. ಅದರೊಳಗೆ ರೂಪಾಯಿಗಳು !

ಅವಳು ಅವುಗಳನ್ನು ನೋಡಿ ಆಶ್ಚರ್ಯಪಡುತ್ತಿದ್ದಾಗ ಪರಾಜಿತನು ಅಲ್ಲಿಗೆ ಬಂದು, "ಏನೇ ನಿನ್ನೆ ಸಾಯಂಕಾಲ ಆ ಪೆಟ್ಟಿಗೆಯೊಳಗೆ ರೂಪಾಯಿಗಳ ಚೀಲವಿಟ್ಟಿದ್ದೆ. ಅದು ಅಲ್ಲಿ ಕಾಣುವುದಿಲ್ಲ. ಏನೇನಾದರೂ ತೆಗೆದೆಯಾ?" ಎಂದು ಕೇಳುತ್ತಾ, ಅವಳ ಕೈಯಲ್ಲಿರುವ ಹಣದ ಚೀಲವನ್ನು ನೋಡಿ, "ಇದನ್ನು ನೀನೇಕೆ ತೆಗೆದಿ? ಇದಕ್ಕಾಗಿ ಒಂದು ಗಂಟೆ ಹೊತ್ತಿನಿಂದ ಹುಡುಕಿ ಹುಡುಕಿ ಸಾಕಾಯಿತು" ಎಂದು ಹೇಳಿ ಚೀಲವನ್ನು ತೆಗೆದುಕೊಂಡನು.

ಪರಾಜಿತನ ಹೆಂಡತಿಗೆ ಆ ಹಣದ ಚೀಲ - ತನ್ನ ಬಿಂದಿಗೆಗೆ ಹೇಗೆ ಬಂತೆಂದು ಅರ್ಥವಾಗಲಿಲ್ಲ. ಹೇಗೋ ತಪ್ಪಿನಿಂದ ತಾನೇ ಬಟ್ಟೆಗಳೊಂದಿಗೆ ತೆಗೆದುಕೊಂಡು ಹೋದೆನೇನೋ ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡಳು.

ಆದು ಹೇಗಾದರೂ ಅಂತೂ ಕಡೆಗೆ ಕಳೆದು ಹೋದ ಸೊತ್ತು ಪರಾಜಿತನ ಕೈಗೆ ತಿರುಗಿ ಬಂತು. ಆಮೇಲೆ ಅವನ ಮಗಳ ಮದುವೆ ನಿರ್ವಿಘ್ನವಾಗಿ ಚೆನ್ನಾಗಿ ನಡೆಯಿತು.





# ಶಿವಪುರಾಣ

ವಿಷ್ಣುಮೂರ್ತಿಯು ಆದಿಶೇಷನನ್ನು ನೋಡಿ, "ಶೇಷಾ, ಈ ದೇವತೆಗಳಿಗಾಗಿ ನೀನು ಮಂದರ ಪರ್ವತವನ್ನು ಕಿತ್ತು ತೆಗೆದುಕೊಂಡು ಹೋಗಿ ಸಮುದ್ರದಲ್ಲಿ ಹಾಕಿಬಿಟ್ಟು ಬಾ" ಎಂದು ಆಜ್ಞೆ ಮಾಡಿದನು.

ಅದರಂತೆ ಆದಿಶೇಷನು ಮಂದರ ಪರ್ವತವನ್ನು ಕಿತ್ತು, ಎತ್ತಿಕೊಂಡು ಹೋಗಿ ಕ್ಷೀರ ಸಮುದ್ರದಲ್ಲಿ ಹಾಕಿಬಂದನು.

ಹಾಲಸಮುದ್ರವನ್ನು ಕಡೆದರೆ ಅಮೃತವು ಬರುತ್ತದೆ. ಹಾಗೆ ಬರುವ ಅಮೃತದ ಸ್ವಲ್ಪ ಭಾಗವನ್ನು ಸಮುದ್ರನಿಗೆ ಕೊಡುವುದೆಂದು ದೇವತೆಗಳು ಒಪ್ಪಿಕೊಂಡಿದ್ದರು.

ಆದರೆ ಅಷ್ಟರಿಂದ ಸಮುದ್ರವನ್ನು ಕಡೆಯುವ ಸಮಸ್ಯೆ ತೀರಿಹೋಗಲಿಲ್ಲ. ಮಂದರ ಪರ್ವತವು ಸಮುದ್ರದಲ್ಲಿ ಮುಳುಗಿ ಕಾಣದಂತಾಯಿತು. ಅದನ್ನು ಯಾರಾದರೂ ಎತ್ತಿ ಹಿಡಿದುಕೊಂಡರೇನೇ ದೇವದಾನವರು ಸಮುದ್ರವನ್ನು ಕಡೆಯಲು ಸಾಧ್ಯವಾಗುತ್ತಿತ್ತು. ಹಾಗೆ ಎತ್ತಿ ಹಿಡಿದು ಕಡೆಯಲಾಗುವಂತೆ ಮಾಡುವವರು ಯಾರಿದ್ದಾರೆ?

ದೇವತೆಗಳು ಮತ್ತೆ ವಿಷ್ಣುವನ್ನು ಪ್ರಾರ್ಥನೆ ಮಾಡಿಕೊಂಡರು. ಆಗ ವಿಷ್ಣು ದಯೆ ತೋರಿಸಿ ಮಹಾ ಕೂರ್ಮದ ರೂಪ ಧರಿಸಿ ತನ್ನ ಬೆನ್ನಿನಲ್ಲಿ ಮಂದರ ಪರ್ವತವನ್ನು ಮೇಲೆತ್ತಿ ಹಿಡಿಯಲು ಒಪ್ಪಿದನು.

ಅದೆಲ್ಲಾ ಸರಿಯಾಯಿತಾದರೂ, ಕಡೆಯಲು ಸರಿಯಾದ ಹಗ್ಗ ಸಿಗಲಿಲ್ಲ. ಆಗ ಮಹಾ ಸರ್ಪ ವಾಸುಕಿ ಮುಂದೆ ಬಂದು ತಾನು ಕಡಗೋಲಿನ ಹಗ್ಗವಾಗಲು ಒಪ್ಪಿಕೊಂಡನು. ಅದಾದ ಮೇಲೆ ದೇವತೆಗಳೂ ದಾನವರೂ ಹಾಲ ಸಮುದ್ರವನ್ನು ಮಥಿಸಲು ತೊಡಗಿದರು.

ಆಗಲೂ ಒಂದು ತಕರಾರು ಎದ್ದಿತು. ದೇವತೆಗಳು ವಾಸುಕಿಯ ತಲೆಯ ಭಾಗವನ್ನು ಹಿಡಿಯುವವೆನ್ನಲು, ದಾನವರು ಒಪ್ಪಲಿಲ್ಲ. "ನಾವು ವಾಸುಕಿಯ ಬಾಲ ಹಿಡಿಯುವುದೇ? ಎಂದಿಗೂ

೧೩. ಹಾಲಾಹಲ ಪ್ರಾಶನ



ಸಾಧ್ಯವಿಲ್ಲ" ಎಂದು ಪಟ್ಟು ಹಿಡಿದು ವಾಸುಕಿಯ ತಲೆಯ ಭಾಗವನ್ನೇ ಹಿಡಿದರು. ಬಾಲವನ್ನು ದೇವತೆಗಳೇ ಹಿಡಿಯಬೇಕಾಯಿತು.

ಅಂತೂ ಇಂತೂ ಹೀಗೆ ಸಮುದ್ರ ಮಥನವು ಪ್ರಾರಂಭವಾಯಿತು. ದೇವತೆಗಳೂ ದಾನವರೂ ದೀರ್ಘಕಾಲದವರೆಗೆ ಶ್ರಮಪಟ್ಟು ಹಾಲಸಮುದ್ರವನ್ನು ಕಡೆಯುವಾಗ ಅದರಿಂದ ಅಮೃತ ಬರುವುದಕ್ಕೆ ಮೊದಲು ಹಾಲಾಹಲವೆಂಬ ವಿಷರಸವು ಹೊರಟು ಅತಿ ವೇಗವಾಗಿ ಎಲ್ಲಾ ದಿಕ್ಕುಗಳಿಗೂ ಹರಡತೊಡಗಿತು.

ಅದನ್ನು ನೋಡಿ ಎಲ್ಲರೂ ಹೆದರಿ ನಡುಗುತ್ತ ಆರ್ತನಾದ ಮಾಡತೊಡಗಿದರು. ಯಾರಿಗೂ ಏನೂ ತೋರದೆ ಎಲ್ಲರೂ ವೇಗವಾಗಿ ಕೈಲಾಸ ಪರ್ವತಕ್ಕೆ ಹೋಗಿ, ಅಲ್ಲಿ ಪಾರ್ವತೀ ಸಹಿತನಾಗಿದ್ದ ಶಿವನನ್ನು ನೋಡಿ, "ದೇವದೇವಾ! ಹಾಲಾಹಲ ವಿಷವು ಮೂರು ಲೋಕಗಳನ್ನೂ ದಹಿಸಿಕೊಂಡು ಬರುತ್ತಿದೆ. ಆದರಿಂದ ನಮ್ಮನ್ನು ರಕ್ಷಿಸು. ಲೋಕಗಳಿಗೆಲ್ಲಾ ನೀನೇ ಈಶ್ವರನಾಗಿರುವಿ. ನಿನ್ನ ಪರಮಜ್ಯೋತಿಯ ಆದ್ಯಂತವನ್ನು ನೋಡಲು ಇಂದ್ರನಿಗೂ, ಬ್ರಹ್ಮನಿಗೂ, ವಿಷ್ಣುವಿಗೂ ಸಾಧ್ಯವಾಗುವಂತಹುದಲ್ಲ! ಆದ್ದರಿಂದ ವಿಷಮಯವಾಗುವ ಜಗತ್ತನ್ನು ಈಗ ನೀನೇ ಕಾಪಾಡಬೇಕಾಗಿದೆ" ಎಂದು ಮೊರೆಯಿಟ್ಟರು.

ಅವರ ದುಃಸ್ಥಿತಿಯನ್ನು ನೋಡಿ ಶಿವನು ಕನಿಕರಪಡುತ್ತ ಪಾರ್ವತಿಯನ್ನು ನೋಡಿ, "ಇವರೆಲ್ಲಾ ಕ್ಷೀರಸಾಗರವನ್ನು ಮಥಿಸುವುದರಿಂದ ಕಾಲಕೂಟ ವಿಷವು ಹುಟ್ಟಿಕೊಂಡು ಪ್ರಜೆಗಳಿಗೆಲ್ಲಾ ಎಂತಹ ಕಷ್ಟ ಬಂತೋ ನೋಡಿದೆಯಾ? ನಾನೀಗ ಆ ವಿಷವನ್ನು ಹೀರಿ ನುಂಗಿಬಿಡುವುದಾಗಿ ನಿಶ್ಚಯಿಸಿದ್ದೇನೆ" ಎಂದನು.

ಅದಕ್ಕೆ ಪಾರ್ವತಿ ಒಪ್ಪಿಗೆ ನೀಡಿದಳು.

ಆಗ ಶಿವನು ಲೋಕಗಳನ್ನೆಲ್ಲಾ ವ್ಯಾಪಿಸುವ ವಿಷವನ್ನೆಲ್ಲಾ ಬಾಚಿ ಒಂದಾಗಿ ಸೇರಿಸಿ ತನ್ನ ಬಾಯೊಳಗೆ ಹಾಕಿ ಒಳಗೆ ನುಂಗದೆ ಕಂಠದಲ್ಲೇ ನಿಲ್ಲಿಸಿಕೊಂಡನು. ಮಹೇಶ್ವರನ ಮೇಲೆ ಕೂಡಾ ಆ ವಿಷವು ತನ್ನ ಪ್ರಭಾವ ತೋರಿಸದೆ ಬಿಡಲಿಲ್ಲ. ಅವನ ಕಂಠವು ಕರಟಿ ಕಪ್ಪಾಗಾಯಿತು. ಅಂದಿನಿಂದ ಎಲ್ಲರ ಭಯವೂ ನಿವಾರಣೆಯಾಗಿ ಶಿವನಿಗೆ ನೀಲಕಂಠನೆಂಬ ಹೆಸರು ಬಂದಿತು.

ಶಿವನ ದಯೆಯಿಂದ ಕಾಲಕೂಟದ ಭಯವು ನಿವಾರಣೆಯಾದ ಮೇಲೆ ದೇವದಾನವರು ಮತ್ತೆ ಹಾಲಸಮುದ್ರವನ್ನು ಕಡೆಯತೊಡಗಿದರು. ಆಗ ಸಮುದ್ರದಿಂದ ಕಾಮಧೇನು ಹುಟ್ಟಿ ಎದ್ದು ಬಂದಿತು. ಅದನ್ನು ಯಜ್ಞಕಾರ್ಯಗಳಿಗಾಗಿ ಮುನಿಗಳು ತೆಗೆದುಕೊಂಡರು. ಆಮೇಲೆ ಉಚ್ಚೈಶ್ರವವೆಂಬ ಬಿಳೀ ಕುದುರೆ ಹುಟ್ಟಿತು. ಅದು ತನಗೆ ಬೇಕೆಂದು ಬಲಿ ಹೇಳಿದನು. ಇಂದ್ರನು ಅದು ತನಗೆ ಬೇಕೆಂದಾಗ



ವಿಷ್ಣು ಸುಮ್ಮನಿರುವಂತೆ ಸನ್ನೆಮಾಡಿ ಇಂದ್ರನ ಬಾಯಿ ಮುಚ್ಚಿಸಿದನು.

ಆದಾದ ಮೇಲೆ ಹಾಲ ಸಮುದ್ರದಿಂದ ಐರಾವತ ವೆಂಬ ಬಿಳೀ ಬಣ್ಣದ, ನಾಲ್ಕು ದಂತಗಳಿರುವ ಆನೆ ಹುಟ್ಟಿತು. ಆದರ ಬೆನ್ನಿಗೆ ಪಾರಿಜಾತವು ಎದ್ದಿತು. ಆದರ ಹಿಂದೆಯೇ ಅಪ್ಸರಿಯರು ಹುಟ್ಟಿದರು. ಆಮೇಲೆ ದೇದೀಪ್ಯಮಾನಳಾಗಿ ಬೆಳಗುವ ಲಕ್ಷ್ಮೀ ದೇವಿ ಉದ್ಭವಿಸಿ ಬಂದಳು. ಅವಳು ಸ್ವತಃ ಬಂದು ವಿಷ್ಣುವಿನ ವಕ್ಷಸ್ಥಳವನ್ನು ವರಿಸಿಕೊಂಡಳು. ಲಕ್ಷ್ಮಿಯೊಂದಿಗೆ ಹಾಲ ಸಮುದ್ರದೊಳಗಿನಿಂದ ಚಂದ್ರನು ಬೆಳಗುತ್ತಾ ಎದ್ದನು.

ಎಲ್ಲವೂ ಬಂದ ಮೇಲೆ ಹಾಲ ಸಮುದ್ರದೊಳಗಿನಿಂದ ಧನ್ವಂತರಿ ಅಮೃತಕಲಶವನ್ನು ಹಿಡಿದು ಕೊಂಡು ಮೇಲೆ ಬಂದನು.

ಕೂಡಲೇ ದೈತ್ಯರು ಆತುರದಿಂದ ಅಮೃತಕಲಶವನ್ನು ಧನ್ವಂತರಿಯಿಂದ ಚಟಕ್ಕನೆ ಎಳೆದುಕೊಂಡು ದೂರ ಓಡಿಹೋಗಿ ಅಲ್ಲಿ ತಮ್ಮೊಳಗೆ ತಾವು ನನಗೆ ತನಗೆಂದು ತಕರಾರು ಮಾಡಿಕೊಳ್ಳತೊಡಗಿದರು.

ಅದನ್ನು ನೋಡಿ ದೇವತೆಗಳು ವಿಷ್ಣುವಿನೊಂದಿಗೆ ಮೊರೆಯಿಟ್ಟರು. "ಚಿಂತಿಸಬೇಡಿ. ಇದೋ ಈಗಲೇ ನಾನು ಮಾಯೋಪಾಯದಿಂದ ಅಮೃತವು ನಿಮಗೇ ದಕ್ಕುವಂತೆ ಮಾಡುತ್ತೇನೆ ನೋಡಿರಿ!" ಎಂದು ಅಭಯವಿತ್ತನು.

ಆಮೇಲೆ ವಿಷ್ಣು ಅತ್ಯಂತ ಆಕರ್ಷಣೆಯ ಸೌಂದರ್ಯವುಳ್ಳ ಮೋಹಿನಿಯ ರೂಪವನ್ನು ಧರಿಸಿ ದೈತ್ಯರ ಹತ್ತಿರ ಹೋದನು. ಅವರು ಆ ಮೋಹಿನಿಯನ್ನು ನೋಡಿ ಮೋಹದಿಂದ ಮರುಳಾಗಿಬಿಟ್ಟರು. "ನಿನಗೂ ಬೇಕೆ? ಈಗ ನಾವು ಈ ಅಮೃತಕ್ಕಾಗಿ ಮೊದಲು ಯಾರಿಗೆಂದು ತಗಾದೆ ಮಾಡಿಕೊಂಡಿದ್ದೇವೆ. ನೀನು ನ್ಯಾಯವಾಗಿ ನಮಗೆ ಇದನ್ನು ಹಂಚಿಕೊಡುವೆಯಾ? ನಿನಗೂ ಸ್ವಲ್ಪ ಇಟ್ಟುಕೋ" ಎಂದರು ದೈತ್ಯರು.

"ನಾನು ಮಾಡುವುದಕ್ಕೆ ಆಕ್ಷೇಪಣೆ ಹೇಳದೆ ಸುಮ್ಮನಿರುವಿರಾದರೆ ಹಂಚಿಕೊಡಲು ಅಡ್ಡಿ ಇಲ್ಲ" ಎಂದಳು ಮೋಹಿನಿ. ದಾನವರು ಅದಕ್ಕೆ ಒಪ್ಪಿದರು. ಅಮೃತಕಲಶ ಮೋಹಿನಿಯ ಕೈಗೆ ಸಿಕ್ಕಿತು.

ಮೋಹಿನಿ ದೇವತೆಗಳನ್ನೂ ದಾನವರನ್ನೂ ಬೇರೆ ಬೇರೆ ಪಂಕ್ತಿಗಳಲ್ಲಿ ಕೂಡಿಸಿ ದೇವತೆಗಳ ಪಂಕ್ತಿಗೆ ಅಮೃತವನ್ನು ಹಂಚತೊಡಗಿದಳು. ಅವಳ ಮಾತಿಗೆ ಕಟ್ಟುಬಿದ್ದ ದೈತ್ಯರು ಅಭ್ಯಂತರವೇನೂ ಹೇಳಲಿಲ್ಲ. ದೇವತೆಗಳೆಲ್ಲರೂ ಅಮೃತವನ್ನು ಕುಡಿದ ಮೇಲೆ ವಿಷ್ಣು ಮೋಹಿನೀ ರೂಪವನ್ನು ಉಪಸಂಹರಿಸಿ ಕೊಂಡನು.

ವಿಷ್ಣು ಮೋಹಿನಿಯ ರೂಪದಲ್ಲಿ ದೈತ್ಯರನ್ನು ಬೆಪ್ಪುಬಡಿಸಿ ಅಮೃತವನ್ನು ದೇವತೆಗಳಿಗೆ ಕೊಟ್ಟ ಸಂಗತಿಯನ್ನು ತಿಳಿದು ಶಿವನು ವೃಷಭ ವಾಹನದ ಮೇಲೆ ಪಾರ್ವತೀದೇವಿಯೊಂದಿಗೆ ವಿಷ್ಣುವನ್ನು



ನೋಡಲು ಬಂದು, “ನಾನು ನಿನ್ನ ಅವತಾರಗಳನ್ನೆಲ್ಲಾ ನೋಡಿದ್ದೇನೆ. ಈಗ ಮೋಹಿನಿಯ ಅವತಾರವೆತ್ತಿದೆಯಂತೆ. ಅದನ್ನು ನೋಡೋಣವೆಂದು ಕುತೂಹಲದಿಂದ ಬಂದೆ. ತೋರಿಸುವಿಯಾ ?” ಎಂದನು.

“ದೈತ್ಯರನ್ನು ಸಮ್ಮೋಹಿಂಸಲಿಕ್ಕಾಗಿ ಎತ್ತಿದ ಆ ರೂಪವನ್ನು ನೀವು ಕೂಡಾ ನೋಡಿದರೆ ನನಗೇನೂ ಆಕ್ಷೇಪವಿಲ್ಲ, ನೋಡಿರಿ” ಎಂದು ವಿಷ್ಣು ಅದೃಶ್ಯನಾಗಿ, ತುಸು ದೂರದಲ್ಲಿ ಮೋಹಿನಿಯ ರೂಪದಲ್ಲಿ ಚೆಂಡಿನೊಂದಿಗೆ ಆಡುವುದು ಕಾಣಿಸಿತು,

ಆ ಮೋಹಿನಿಯನ್ನು ನೋಡಿದ ಕೂಡಲೇ ಶಿವನು ತನ್ನೊಂದಿಗಿರುವ ಪಾರ್ವತಿಯನ್ನೂ, ಪ್ರಮಥ ಗಣಗಳನ್ನೂ ಮರೆತುಬಿಟ್ಟನು. ಎಲ್ಲರೂ ನೋಡುತ್ತಿದ್ದ ಹಾಗೆಯೇ ಶಿವನು ಮೋಹಿನಿಯ ಹಿಂದೆಯೇ ಹೋಗತೊಡಗಿದನು. ಅಷ್ಟರಲ್ಲಿ ಅವನಿಗೆ ಇದೆಲ್ಲಾ ವಿಷ್ಣುಮಾಯೆ ಎಂದು ನೆನಪಿಗೆ ಬಂತು, ವಿಷ್ಣು ಶಿವನ ಆತ್ಮನಿಷ್ಠೆಯನ್ನು ಮೆಚ್ಚಿ ಪ್ರಶಂಸೆ ಮಾಡಿದನು.

ಆಮೇಲೆ ಶಿವನು ವಿಷ್ಣುವಿನಿಂದ ಅಪ್ಪಣೆ ಪಡೆದು ಪಾರ್ವತಿಯೊಡಗೆ ಕೈಲಾಸಕ್ಕೆ ಹಿಂದಿರುಗಿದನು.

ಪೂರ್ವ ಕಾಲದಲ್ಲಿ ಅಯೋಧ್ಯಾ ನಗರವನ್ನು ಬಾಹುವೆಂಬ ರಾಜನು ಪಾಲಿಸಿಕೊಂಡಿದ್ದನು. ಆಗ ಹೈಹಯನೆಂಬವನು ಇವನ ರಾಜ್ಯದ ಮೇಲೆ ದಾಳಿ ಮಾಡಿ ಇವನನ್ನು ರಾಜ್ಯದಿಂದ ಓಡಿಸಿಬಿಟ್ಟನು. ಬಾಹು ರಾಜನು ತನ್ನ ಹೆಂಡತಿಯರೊಂದಿಗೆ ಕಾಡಿಗೆ ಹೋದನು.

ಕಾಡಿನಲ್ಲಿರುವಾಗ ಬಾಹುವಿನ ಹೆಂಡತಿಯರಲ್ಲಿ ಒಬ್ಬಳು ಗರ್ಭಿಣಿಯಾದಳು. ಅಷ್ಟರಲ್ಲಿಯೇ ಬಾಹುವಿಗೆ ಸಾವು ಬಂದಿತು. ಗರ್ಭಿಣಿಯಾದ ಅವನ ಹೆಂಡತಿ ಗಂಡನೊಂದಿಗೆ ಸಹಗಮನ ಮಾಡಲು ನಿಶ್ಚಯಿಸಿದಳು. ಆಗ ಔರ್ವನೆಂಬ ಮುನಿ ಅವಳನ್ನು ತಡೆದು ನಿಲ್ಲಿಸಿ, ಅವಳಿಗೆ ಮಗನು ಹುಟ್ಟುವನೆಂತಲೂ ಹೇಳಿದನು.

ಇದು ತಿಳಿದು ಅವಳ ಸವತಿಯರು ಅವಳನ್ನು ಕೊಂದುಬಿಡಲು ಆಹಾರದಲ್ಲಿ ವಿಷ ಬೆರೆಸಿದರು. ಆ ವಿಷದೊಂದಿಗೇ ಅವಳಿಗೆ ಪುತ್ರನು ಹುಟ್ಟಿದನು. ಆದುದರಿಂದ ಅವನಿಗೆ ಸಗರ (ಗರಳದೊಂದಿಗೆ ಕೂಡಿದವನು) ಎಂದು ನಾಮಕರಣ ಮಾಡಲಾಯಿತು.

ಸಗರನು ಕಾಲಕ್ರಮದಲ್ಲಿ ಚಕ್ರವರ್ತಿಯಾಗಿ ಔರ್ವನ ಸಹಾಯದಿಂದ ಅನೇಕ ಅಶ್ವಮೇಧಗಳನ್ನು ಮಾಡಿದನು. ಅವನಿಗೆ ಸುಮತಿ, ಕೇಶಿನಿ ಎಂಬ ಇಬ್ಬರು ಹೆಂಡತಿಯರಿದ್ದರು. ಆದರೆ ಅವನಿಗೆ ಸಂತಾನವಾಗದೆ ಹೋಯಿತು. ಆದುದರಿಂದ ಅವನು ನಗರವನ್ನು ಬಿಟ್ಟು ಅಡವಿಗೆ ಹೋಗಿ ಔರ್ವನನ್ನು ಕಳೆತುಕೊಂಡು ತನ್ನ ಸಮಸ್ಯೆಯನ್ನು ಅವನೊಂದಿಗೆ ಹೇಳಿದನು.

ಔರ್ವನು ಸಗರನ ಸಂಗತಿಯನ್ನೆಲ್ಲಾ ಕೇಳಿ, ಅವನ ಹೆಂಡತಿಯರಿಗೆ ಸಂತಾನವಾಗುತ್ತದೆಂದೂ, ಅವನು ತನ್ನ ಹೆಂಡತಿಯರೊಂದಿಗೆ ಕೈಲಾಸಕ್ಕೆ ಹೋಗಿ ತಪಸ್ಸು ಮಾಡಬೇಕೆಂದೂ ಹೇಳಿದನು. ಸಗರನು ಪತ್ನಿಯರೊಂದಿಗೆ ಕೈಲಾಸಕ್ಕೆ ಹೋಗಿ ಶಿವನನ್ನು ಧ್ಯಾನಿಸುತ್ತ ತಪಸ್ಸು ಮಾಡಿದನು. ಕಡೆಗೆ ಶಿವನು ಸಗರನ ಮುಂದೆ ಪ್ರತ್ಯಕ್ಷನಾಗಿ ಸಂತಾನವಾಗುವಂತೆ ವರವನ್ನು ಕೊಟ್ಟನು.

ಸಗರನು ನಗರಕ್ಕೆ ಹಿಂದಿರುಗಿ ಬಂದ ಮೇಲೆ ಅವನ ಇಬ್ಬರು ಹೆಂಡತಿಯರೂ ಗರ್ಭವತಿಯರಾಗಿ ಇಬ್ಬರೂ ಪುತ್ರರನ್ನು ಹಡೆದರು. ಆದರೆ ಸುಮತಿಯ ಮಗನು ಪಿಂಡರೂಪನಾಗಿದ್ದನು. ಔರ್ವನು ಬಂದು ನಡೆದುದನ್ನು ನೋಡಿ ಸುಮತಿಗೆ ಹುಟ್ಟಿದ ಮಗನಲ್ಲಿ ಅರವತ್ತು ಸಾವಿರ ಮಂದಿ ಕುಮಾರರಿರುವಂತೆ ಹೇಳಿ, ಆ ಮಗುವನ್ನು ಅರುವತ್ತು ಸಾವಿರ ಪಿಂಡಗಳನ್ನಾಗಿ ಮಾಡಿಸಿ ಕುಂಡಗಳಲ್ಲಿ ಇಡಿಸಿದನು. ಆ ಕುಂಡಗಳಿಂದ ಅರುವತ್ತು ಸಾವಿರ ಮಂದಿ ಕುಮಾರರು ಹುಟ್ಟಿದರು.

ಕೇಶಿನಿಯ ಮಗನಾದ ಅಸಮಂಜಸನು ಮಹಾ ಭಯಂಕರವಾದ ಕಾರ್ಯಗಳನ್ನು ಮಾಡುವವನಾದನು. ಬಹಳ ಕ್ರೂರಕರ್ಮಿಯಾದನು. ಭಿಕ್ಷುಕರನ್ನೂ, ಮುದುಕರನ್ನೂ ಎತ್ತಿ ನದಿಗೆ ಬಿಸುಡುತ್ತಿದ್ದನು. ಅವನ ಪೀಡನೆಗಳನ್ನು ಸಹಿಸಲಾಗದೆ ಪ್ರಜೆಗಳು ಬಂದು ಸಗರನೊಂದಿಗೆ ಮೊರೆಯಿಟ್ಟರು. ಸಗರನು ಅಸಮಂಜಸನನ್ನು ನಗರದಿಂದ ಹೊರಗೆ ಹಾಕಿಬಿಟ್ಟನು.

ಅದಾದ ಮೇಲೆ ಸಗರನು ಅಶ್ವಮೇಧ ಯಾಗ ಮಾಡಲು ನಿಶ್ಚಯಿಸಿ, ಯಾಗಾಶ್ವವನ್ನು ದೇಶಗಳ ಮೇಲೆ ಹೋಗಲು ಬಿಟ್ಟು, ಅದರ ಹಿಂದೆ ತನ್ನ ಅರುವತ್ತು ಸಾವಿರ ಮಂದಿ ಕುಮಾರರೆಲ್ಲರನ್ನೂ ಕಳುಹಿಸಿಕೊಟ್ಟನು.

ಸಗರನಿಂದ ಹೊರಡಿಸಲ್ಪಟ್ಟ ಕುದುರೆ ಒಂದಾನೊಂದು ಸ್ಥಳದಲ್ಲಿ ತಿರುಗುತ್ತ, ಅದು ಹೇಗೋ ಆಕಸ್ಮಿಕವಾಗಿ ಮಾಯವಾಗಿ ಹೋಯಿತು. ಸಗರ ಕುಮಾರರು ಅದನ್ನು ಹುಡುಕಿ ಹುಡುಕಿ ಬೇಸತ್ತರು. ಭೂಮಿಯಲ್ಲೆಲ್ಲಿಯೂ ಅದು ಕಾಣದೆ ಹೋದುದರಿಂದ, ನಗರಕ್ಕೆ ಹಿಂದಿರುಗಿ ಬಂದು, ಯಾಗಾಶ್ವವು ಮಾಯವಾದ ಸಮಾಚಾರವನ್ನು ತಂದೆಯೊಂದಿಗೆ ಹೇಳಿದರು.

ಸಗರನು ಅವರ ಮೇಲೆ ಅತ್ಯಂತ ಕೋಪದಿಂದ ಛೀಕಾರಿಸಿ, ಕುದುರೆಯಿಲ್ಲದೆ ನಗರದೊಳಗೆ ಕಾಲಿಡಕೂಡದೆಂದು ಶಾಸಿಸಿದನು. ಸಗರಕುಮಾರರು ಅತ್ಯಂತ ಹಟದಿಂದ ಮತ್ತೆ ಅಶ್ವವನ್ನು ಹುಡುಕಲು ಹೊರಟರು.





# ಅಮ್ಮನವರನಗ

ಹಿಂದೆ ನಾಗವರವೆಂಬ ಊರಿನಲ್ಲಿ ಪುರಾತನವಾದೊಂದು ಅಮ್ಮನವರ ಗುಡಿಗೆ ಶಿವಯ್ಯನೆಂಬವನು ಅರ್ಚಕನಾಗಿದ್ದನು. ಆ ಊರಿನ ನೆರೆಯಲ್ಲಿ ಕೇಶವಪುರವೆಂಬ ಜಮೀನ್ದಾರೀ ಊರಿದ್ದಿತು. ಅಲ್ಲಿಯ ಜಮೀನ್ದಾರನು ಒಂದು ಸಾರಿ ಜಾತ್ರೆಯ ವೇಳೆಯಲ್ಲಿ ನಾಗವರದ ಅಮ್ಮನವರಿಗೆ ಮೂಗುತಿ, ಪವನಿನ ಸರ, ಒಡ್ಯಾಣಗಳಂತಹ ಬಂಗಾರದ ನಗಗಳನ್ನು ಮಾಡಿಸಿ ಅಲಂಕರಿಸಿದ್ದನು. ಆಗಿನಿಂದ ಅಮ್ಮನವರ ವಿಗ್ರಹವು ಮೊದಲಿಗಿಂತ ಚೆನ್ನಾಗಿ ನೋಡಲು ದಿವ್ಯವಾಯಿತು, ಭವ್ಯವಾಯಿತು. ಬೆಲೆ ಬಾಳುವ ಆ ಬಂಗಾರದ ನಗಗಳನ್ನು ಯಾರೂ ಕದ್ದುಕೊಂಡು ಹೋಗದಂತೆ ನೋಡಿಕೊಳ್ಳುವ ಬಾಧ್ಯತೆಯನ್ನು ಅರ್ಚಕ ಶಿವಯ್ಯನಿಗೇ ಒಪ್ಪಿಸಲ್ಪಟ್ಟಿತ್ತು.

ಶಿವಯ್ಯನ ಹೆಂಡತಿ ಗಿರಿಜಮ್ಮ ತುಂಬಾ ಗಯ್ಯಾಳಿಯಾಗಿದ್ದಳು. ಅವಳು ಕೇಳಿದುದನ್ನು ಕೂಡಲೇ ತಂದುಕೊಡದಿದ್ದರೆ ಆ ದಿನ ಶಿವಯ್ಯನಿಗೆ ಭೋಜನ ವಿರುತ್ತಿದ್ದಿಲ್ಲ.

ಅಮ್ಮನವರಿಗೆ ಹೊಸತಾಗಿ ಬಂಗಾರದ ನಗಗಳ ಅಲಂಕಾರ ನಡೆದ ಮೇಲೆ ಗಿರಿಜಮ್ಮನ ದೃಷ್ಟಿ ಅವುಗಳ ಮೇಲೆ ಬಿತ್ತು. ಅಂಥವುಗಳನ್ನು ತಾನು ಧರಿಸಿಕೊಳ್ಳಬೇಕೆಂಬ ಆಶೆ ಅವಳಲ್ಲಿ ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚಾಗುತ್ತಾ ಹೋಯಿತು. ಕಡೆಗೆ ಅವಳು ಗಂಡನೊಂದಿಗೆ ಆ ನಗಗಳನ್ನು ತಂದು ಕೊಡುವಂತೆ ಬಲವಂತ ಮಾಡತೊಡಗಿದಳು.

ಹೆಂಡತಿಯ ಬೇಡದ ಆಶೆಯನ್ನು ನೋಡಿದ ಶಿವಯ್ಯನು ತುಂಬಾ ಹೆದರಿ, ಬಹಳ ಕೋಪದಿಂದ, "ಏನೇ ಇದು ? ನೀನೇನು ಹೋಗುವ ಕಾಲ ಬಂತು ! ಪೂಜ್ಯಳಾದ ಅಮ್ಮನವರ ನಗಗಳನ್ನು ಸಾಮಾನ್ಯ ಸ್ತ್ರೀಯಾದ ನೀನು ಧರಿಸುವುದು ಮಹಾಪಾಪ ! ಸುಮ್ಮನೆ ಹಟ ಹಿಡಿಯಬೇಡ. ಸ್ವಲ್ಪ ಕಾಲ ತಾಳಿಕೊಂಡಿರು. ಅಂತಹ ನಗಗಳೇ ಬೇಕಾದರೆ ನಾನೇ ನಿನಗೆ ಹೇಗಾದರೂ ಬೇರೆಯೇ ಮಾಡಿಸುತ್ತೇನೆ" ಎಂದನು.

ಆದರೆ ಗಿರಿಜಮ್ಮ ಅದಕ್ಕೆ ಒಪ್ಪಲಿಲ್ಲ. "ನೀವು ನಗ ಮಾಡಿಸುವ ಕಾಲಕ್ಕೆ ನಾನು ಮುದುಕಿಯಾಗುತ್ತೇನೆ. ಅದೆಲ್ಲಾ ಆಗೋಲ್ಲ. ಈ ದಿನ ರಾತ್ರಿ ಆ ನಗಗಳನ್ನು ತಂದುಕೊಡದಿದ್ದರೆ, ನಾಳೆ ಬೆಳಿಗ್ಗೆ ಮನೆ ಹಿಂದಿರುವ ಬೇವಿನ ಮರದಲ್ಲಿ ನನ್ನ ಹೆಣ ನೇತಾಡು

ರಾಂಬಾಬು



ವುದನ್ನು ನೋಡುವಿರಿ!" ಎಂದು ಸಂತಾಪದಿಂದ ಕಣ್ಣೀರು ಸುರಿಸುತ್ತ ಗಂಡನನ್ನು ಹೆದರಿಸಿದಳು.

ಅವಳು ಹೇಳಿದ ಹಾಗೆಯೇ ಮಾಡಿಬಿಡುವಳೆಂದು ಶಿವಯ್ಯನು ಹೆದರಿದನು. ಆ ದಿನ ರಾತ್ರಿ ಅವನು ಅಮ್ಮನವರ ವಿಗ್ರಹದ ಮುಂದೆ ಕೈಗಳನ್ನು ಜೋಡಿಸಿ, "ಅಮ್ಮಾ, ನನ್ನ ಹೆಂಡತಿಯ ಗಯ್ಯಾಳಿತನದ ಗುಣ ನಿನಗೆ ತಿಳಿಯದ್ದಲ್ಲ, ಅವಳನ್ನು ಮೆಲ್ಲಗೆ ಸಮಾಧಾನ ಪಡಿಸಿ, ಪುಂಗಾಡಿಸಿ ಬೇಗದಲ್ಲೇ ನಿನ್ನ ನಗಗಳನ್ನು ನಿನಗೆ ಒಪ್ಪಿಸುತ್ತೇನೆ. ಕ್ಷಮಿಸಲಾಗದ ತಪ್ಪು ಮಾಡುತ್ತಿದ್ದರೂ ದಯಮಾಡಿ ನನ್ನನ್ನು ಕ್ಷಮಿಸು ತಾಯೇ!" ಎಂದು ಬೇಡಿಕೊಂಡು ವಿಗ್ರಹದ ಮೇಲಿರುವ ಎಲ್ಲಾ ನಗಗಳನ್ನೂ ಕಳಚಿ ಗಂಟು ಕಟ್ಟಿದನು.

ಶಿವಯ್ಯನು ಗುಡಿಯಿಂದ ಹೊರಗೆ ಬರಲಿರುವಾಗ, ಅಮ್ಮನವರಿಗೆ ಸನ್ನಿಹಿತಳಾದ ಮತ್ತೊಂದು ದೇವತೆ ಅವಳನ್ನು ನೋಡಲು ಬಂದು, ಶಿವಯ್ಯ ಮಾಡುವ ಕೆಲಸವನ್ನು ನೋಡಿ ಮುಂದೆ ಬಾರದೆ ಮೂಲೆಯಲ್ಲಿ ಸುಮ್ಮನೆ ನಿಂತಳು.

ಶಿವಯ್ಯ ಅತ್ತ ತಿರುಗಿದ ಮೇಲೆ ಅವಳು ಅಮ್ಮನವರ ಹತ್ತಿರ ಬಂದು, "ಅವನು ನಿನ್ನ ನಗಗಳನ್ನು ಕಳಚುವಾಗ ನೀವು ಏನೂ ಮಾಡದೆ ಸುಮ್ಮನಿದ್ದೆಯೇಕೆ? ನಗಗಳಿಲ್ಲದಿದ್ದರೆ ನಿನ್ನ ವಿಗ್ರಹದ ಕಳೆಯೇ ಹೋಗಿಬಿಡುತ್ತದೆ. ಈಗಲೇ ಆ ಪೂಜಾರಿಗೆ ತಕ್ಕ ಬುದ್ಧಿ ಕಲಿಸು" ಎಂದಳು.

ಅದಕ್ಕೆ ಅಮ್ಮನವರು ಸಣ್ಣಗೆ ನಕ್ಕು, "ಈ ಶಿವಯ್ಯ ನನ್ನ ಪರಮ ಭಕ್ತನು. ನನ್ನ ಹತ್ತಿರ ಮುಂದಾಗಿ ಕ್ಷಮೆ ಕೇಳಿಕೊಂಡು ಅವುಗಳನ್ನು ತಿರುಗಿ ತಂದುಕೊಡುವುದಾಗಿ ಮಾತು ಕೊಟ್ಟಿದ್ದಾನೆ. ಅವನ ಹೆಂಡತಿಗೆ ನಾಲ್ಕು ದಿನಗಳ ಅವಧಿ ಕೊಡುತ್ತೇನೆ. ಈ ನಾಲ್ಕು ದಿನಗಳಲ್ಲಿ ಅವಳು ನಗಗಳನ್ನು ಗಂಡನ ಕೈಗೆ ಕೊಡದಿದ್ದರೆ ತಲೆಯೊಡೆದು ಸಾಯುವಳು" ಎಂದಳು.

ನಗಗಳ ಮೂಟೆಯೊಂದಿಗೆ ಹೊರಗೆ ಬರುತ್ತಿದ್ದ ಶಿವಯ್ಯನ ಕಿವಿಗೆ ಅಮ್ಮನವರು ಹೇಳಿದ ಮಾತುಗಳ ಕಡೇ ವಾಕ್ಯವು ಮಾತ್ರ ಕಿವಿಗೆ ಬಿತ್ತು. ಅವನು ಭೀತಿಯಿಂದ ನಡುಗಿ ಅಮ್ಮನವರ ವಿಗ್ರಹದ ಕಡೆಗೆ ನೋಡಿ, ಹಾಗೆಯೇ ನಿಂತುಬಿಟ್ಟನು. ಆದರೆ ಆಮೇಲೆ ಅವನಿಗೆ ಯಾವ ಮಾತೂ ಕೇಳಿಸಲಿಲ್ಲ. ಆದುದರಿಂದ ತಾನೇನೋ ಭ್ರಮೆಪಟ್ಟೆನೆಂದು ಅನುಮಾನಿಸಿಕೊಂಡನು.

ಅಂತೂ ಧೈರ್ಯದಿಂದ ಶಿವಯ್ಯನು ಗುಡಿಗೆ ಬೀಗಹಾಕಿ ನಗಗಳ ಮೂಟೆಯೊಂದಿಗೆ ಮನೆಗೆ ಬಂದು ಮೂಟೆಯನ್ನು ಹೆಂಡತಿಯ ಕೈಗೆ ಕೊಟ್ಟನು. ಗಿರಿಜಮ್ಮ ಅತ್ಯಾನಂದದಿಂದ ಅಮ್ಮನವರ ನಗಗಳನ್ನೆಲ್ಲಾ ಆ ಕೂಡಲೇ ತಾನು ಧರಿಸಿಕೊಂಡಳು.

ಶಿವಯ್ಯನು ಹೆಂಡತಿಯನ್ನು ಕೋಪದಿಂದ ನೋಡುತ್ತಾ, ಅಮ್ಮನವರ ಗುಡಿಯಲ್ಲಿ ತನ್ನ ಕಿವಿಗೆ

ಬಿಟ್ಟ ಮಾತನ್ನು ಅವಳಿಗೆ ಹೇಳಿದನು. ಅವಳು ಗಂಡನನ್ನು ಅದಕ್ಕಿಂತ ಹೆಚ್ಚಿನ ಕೋಪದಿಂದ ನೋಡುತ್ತ, "ಹೌದೌದು! ನಿಮ್ಮ ಪುಕ್ಕಲುತನಕ್ಕೆ ತಕ್ಕಹಾಗೆ ಅದೂ ಕೇಳೀತು! ಇನ್ನೂ ಕೇಳೀತು! ಅಮ್ಮನವರ ನಗಗಳನ್ನು ತೆಗೆಯುವುದೆಂದರೆ ಅಷ್ಟು ಭಯ ನಿಮಗೆ. ನಿಮ್ಮ ಭ್ರಮೆಗೆ ಬೆಂಕೀ ಹಾಕಿತು. ನಾನು ಈ ನಗಗಳನ್ನು ಕೊಡುವುದೇ ಇಲ್ಲ!" ಎಂದಳು.

"ಅಯ್ಯಯ್ಯೋ! ನನ್ನ ಹೆಂಡತಿಯನ್ನು ಕಾಪಾಡುವ ಭಾರ ನಿನ್ನದೇ ಅಮ್ಮಾ!" ಎಂದು ಶಿವಯ್ಯ ಮನಸಿಲ್ಲಿಯೇ ಬೇಡಿಕೊಂಡನು.

ಮೂರು ದಿನಗಳು ಕಳೆದುವು. ಗಿರಿಜಮ್ಮ ತನ್ನ ಶರೀರದ ಮೇಲಿನಿಂದ ಅಮ್ಮನವರ ನಗಗಳನ್ನು ತೆಗೆಯಲಿಲ್ಲ. ಶಿವಯ್ಯನಿಗೆ ಅಮ್ಮನವರ ಮಾತಿನ ಮೇಲೆ ನಂಬುಗೆಯಿದ್ದಿತು. ಏನೂ ತೋರದೆ ಗಾಬರಿಯಾಗತೊಡಗಿದನು.

ಆ ದಿನ ರಾತ್ರಿ ಗಿರಿಜಮ್ಮ ನಗಗಳನ್ನು ಕಳಚದೆಯೇ ಮಲಗಿ ನಿದ್ದೆ ಮಾಡಿದಳು. ಸರಿಯಾಗಿ ನಡುರಾತ್ರಿಯ ಹೊತ್ತಿಗೆ ಶಿವಯ್ಯನ ಮನೆಯೊಳಗೆ ಒಬ್ಬ ಕಳ್ಳನು ಪ್ರವೇಶ ಮಾಡಿದನು. ಅವನು ನಿದ್ದೆಯ ಮತ್ತಿನಲ್ಲಿ ಮೈಮರೆತ ಗಿರಿಜಮ್ಮನ ಶರೀರದ ಮೇಲಿದ್ದ ನಗಗಳನ್ನು ಬಹಳ ಚಾಕಚಕ್ಯತೆಯಿಂದ ಕಳಚಿಕೊಂಡನು. ಆಮೇಲೆ ಅವನು ಆ ನಗಗಳ ಮೂಟೆಯೊಂದಿಗೆ ಅಮ್ಮನವರ ಗುಡಿಯ ಕಡೆಗೇ ಹೋದನು.

ಆ ಕಳ್ಳನ ಉದ್ದೇಶವೇನೆಂದರೆ, ಅಮ್ಮನವರ ನಗಗಳನ್ನೂ ಅಪಹರಿಸಬೇಕೆಂಬುದೇ. ಆದರೆ ಅವನು ಗುಡಿಯ ಹತ್ತಿರ ಹೋದಾಗ ಗುಡಿಯ ಬೀಗವು ಒಡೆಯಲ್ಪಟ್ಟು ಬಾಗಿಲುಗಳು ತೆರೆದು ಕೊಂಡಿದ್ದುವು. ಅದನ್ನು ನೋಡಿ ಅವನು ಬಹಳ ಆಶ್ಚರ್ಯಪಟ್ಟನು. ತನಗಿಂತ ಮೊದಲೇ ಯಾವನೋ ಇನ್ನೊಬ್ಬ ಕಳ್ಳ



ಗುಡಿಯೊಳಗೆ ಹೊಕ್ಕನೆಂದು ತಿಳಿದು, ಬಲವಾದ ದೊಣ್ಣೆಯೊಂದನ್ನು ಮುಷ್ಟಿಯಲ್ಲಿ ಹಿಡಿದುಕೊಂಡು ಗುಡಿಯೊಳಗೆ ಹೊಕ್ಕನು.

ನಿಜಕ್ಕೂ ಸ್ವಲ್ಪ ಮೊದಲು ಬೀಗ ಒಡೆದು ಗುಡಿಯೊಳಗೆ ಹೊಕ್ಕ ಮತ್ತೊಬ್ಬ ಕಳ್ಳನು ಅಮ್ಮನವರ ವಿಗ್ರಹದ ಮೇಲೆ ನಗಗಳೇ ಇಲ್ಲದಿರುವುದನ್ನು ನೋಡಿ ಮೆಟ್ಟಿಬಿದ್ದನು. ಆ ನಗಗಳನ್ನು ಮತ್ತಾವನೋ ದೋಚಿಕೊಂಡು ಹೋದನೋ, ಅಥವಾ ರಕ್ಷಣೆಗಾಗಿ ಅರ್ಚಕನೇ ತನ್ನ ಮನೆಗೆ ತೆಗೆದುಕೊಂಡು ಹೋದನೋ ಎಂಬ ಅನುಮಾನವಾಯಿತು. ಅವನು ನಿರಾಶೆಯಿಂದ ಹೊರಗೆ ಬರುತ್ತಿದ್ದನು.

ಆ ಸಮಯದಲ್ಲಿ ನಗಗಳ ಮೂಟೆಯೊಂದಿಗೆ ದೊಣ್ಣೆ ಹಿಡಿದು ಒಳಗೆ ಬರುವ ಕಳ್ಳನು ಕಾಣಿಸಿದನು. ಅವನು ತನ್ನ ದೊಣ್ಣೆಯನ್ನು ಮೇಲೆತ್ತಿ "ಎಲೋ! ನನ್ನ ಕಣ್ಣು ಮುಂದೆಯೇ ಬಂದು ನಗಗಳನ್ನು ದೋಚಿಕೊಂಡು ಹೊರಟಿರುವೆಯಾ?"

ಎನ್ನುತ್ತ, ಹೊರಗೆ ಬರುವ ಕಳ್ಳನ ತಲೆಯ ಮೇಲೆ ಬಲವಾಗಿ ಹೊಡೆದನು.

ಹೀಗಾಗುವುದೆಂದು ಊಹಿಸಿದ ಎರಡನೇ ಕಳ್ಳನೂ ಅದೇ ಕ್ಷಣದಲ್ಲಿ ಇದಿರಾಳಿ ಕಳ್ಳನ ತಲೆಯ ಮೇಲೆ ತನ್ನ ದೊಣ್ಣೆಯಿಂದ ಹೊಡೆದನು. ಹೀಗಾಗಿ ಇಬ್ಬರು ಕಳ್ಳರೂ ಬಲವಾದ ಪೆಟ್ಟುಗಳಿಂದ ಪ್ರಜ್ಞೆ ತಪ್ಪಿ ಅಲ್ಲೇ ಬಿದ್ದುಬಿಟ್ಟರು. ಬೆಳಗಿನಜಾವದಲ್ಲಿ ನಿದ್ದೆಯಿಂದ ಎದ್ದ ಗಿರಿಜಮ್ಮ ತನ್ನ ಶರೀರದ ಮೇಲೆ ನಗಗಳೇನೂ ಇಲ್ಲದೆ ಬೋಳಾಗಿರುವುದನ್ನು ನೋಡಿ ದೊಡ್ಡದನಿಯಿಂದ ಕೂಗುತ್ತ ಗಂಡನನ್ನು ಎಬ್ಬಿಸಿದಳು. ಶಿವಯ್ಯ ಗಾಬರಿ ಬಿದ್ದೆದ್ದು ಕೊಂಪೆ ಮುಳುಗಿದಂತೆ ನಡುಗಾಡಿಕೊಂಡು ಅಮ್ಮನವರ ಗುಡಿಯ ಕಡೆಗೆ ಓಡಿದನು. ಅಲ್ಲಿ ಪಕ್ಕದಲ್ಲಿ ಬಿದ್ದಿರುವ ನಗಗಳ ಮೂಟೆಯನ್ನೂ, ಪ್ರಜ್ಞೆ ತಪ್ಪಿ ಬಿದ್ದಿರುವ ಇಬ್ಬರು ಮನುಷ್ಯರನ್ನೂ ನೋಡಿ, ಏನು ನಡೆದಿರಬಹುದೆಂದು ಸ್ವಲ್ಪ ಮಟ್ಟಿಗೆ ಊಹಿಸುತ್ತಾ ಆಶ್ಚರ್ಯಪಟ್ಟನು.

ಶಿವಯ್ಯನು ಮೊದಲು ಮೂಟೆಯನ್ನು ಬಿಚ್ಚಿ ನಗಗಳನ್ನು ತೆಗೆದು ಅಮ್ಮನವರಿಗೆ ಅಲಂಕರಿಸಲು ಅಣಿಯಾದನು. ಆಗಲೇ ಅಲ್ಲಿಗೆ ಗಿರಿಜಮ್ಮನೂ ಬಂದಳು. ಹೆಂಡತಿಯನ್ನು ನೋಡಿ ಶಿವಯ್ಯ, "ಏನೇ, ಈಗಲಾದರೂ ಅಮ್ಮನವರ ಮಹಾತ್ಮೆ ಅರ್ಥವಾಯಿತೆ? ನಾಲ್ಕು ದಿನಗಳಲ್ಲಿ ನಗಗಳನ್ನು ತಿರುಗಿ ಕೊಡದೇ ಹೋದರೆ ನಿನ್ನ ತಲೆಯೊಡೆದು ಸಾಯುವಿ ಎಂದು ಅಮ್ಮನವರ ಮಾತು ಸುಳ್ಳು ಅಂದೆಯಲ್ಲಾ? ಆ ಮಾತು ನನ್ನ ಕಿವಿಗೆ ಬಿದ್ದದ್ದು ನಿಜವೇ. ಅದೆಲ್ಲಾ ನನ್ನ ಭ್ರಮೆ ಎಂದು ತಿರಸ್ಕಾರ ಮಾಡಿದಿ! ಏನೋ ಪುಣ್ಯದಿಂದ ಆ ಮಹಾ ತಾಯಿ ಹೀಗೆ ಮಾಡಿಸಿ ನಿನ್ನ ಜೀವ ಉಳಿಸಿದಳು" ಎಂದನು.

ಗಿರಿಜಮ್ಮ ಅಮ್ಮನವರ ವಿಗ್ರಹದ ಮುಂದೆ ಸಾಷ್ಟಾಂಗವಾಗಿ ಬಿದ್ದು, "ಅಮ್ಮಾ, ನಾನು ಮಹಾ ಮೂರ್ಖಳು. ನಿನ್ನ ಭಕ್ತರಾದ ನನ್ನ ಗಂಡನ ಕಾರಣದಿಂದಾಗಿ ನನ್ನ ಅಪರಾಧ ಕ್ಷಮಿಸಿ ನನ್ನನ್ನು ಉಳಿಸಿರುವಿ. ಈ ಕ್ಷಣದಿಂದ ನಾನೂ ನಿನ್ನ ಭಕ್ತೆಯಮ್ಮಾ" ಎಂದಳು ದೀನಳಾಗಿ.

ತರುವಾಯ ಊರಿನ ಕಾವಲುಗಾರರು ಬಂದು, ಆಗಲೇ ಪ್ರಜ್ಞೆಯಿಂದ ಏಳುತ್ತಿದ್ದ ಇಬ್ಬರು ಕಳ್ಳರನ್ನೂ ನ್ಯಾಯಾಧಿಕಾರಿಯ ಬಳಿಗೆ ಎಳೆದುಕೊಂಡು ಹೋದರು.

ಈಗ ಗಿರಿಜಮ್ಮ ತನ್ನ ಗಯ್ಯಾಳಿ ತನವನ್ನು ಪೂರ್ತಿ ಬಿಟ್ಟಳು. ಗಂಡನು ಹೇಳಿದ ಹಾಗೆ ಕೇಳುತ್ತ ಅವನೊಂದಿಗೆ ಅಮ್ಮನವರ ಸೇವೆ ಮಾಡಿಕೊಂಡಿದ್ದಳು.





# ಚಾಣಕ್ಯನ ಕಥೆ

ಪೂರ್ವಕಾಲದಲ್ಲಿ ಚಣಕವೆಂಬ ಗ್ರಾಮದಲ್ಲಿ ಚಣೀ ಎಂಬ ಬ್ರಾಹ್ಮಣನೊಬ್ಬನಿದ್ದನು. ಅವನು ಜೈನ ಮತಾವಲಂಬಿಯಾಗಿದ್ದನು. ಅವನ ಹೆಂಡತಿಯ ಹೆಸರು ಚಣೇಶ್ವರಿ. ಅವರ ಒಬ್ಬನೇ ಒಬ್ಬ ಮಗನಾದ ಚಾಣಕ್ಯನೆಂಬುವನು ಬೆಳೆಯುತ್ತಾ ಬಂದಂತೆ ಬಹಳ ಪ್ರಸಿದ್ಧಿಗೇರಿದನು.

ಚಾಣಕ್ಯನು ಹುಟ್ಟುವಾಗಲೇ ಎಲ್ಲಾ ಮಕ್ಕಳಂತಿರಲಿಲ್ಲ. ಆಗಲೇ ಅವನಿಗೆ ಎಲ್ಲಾ ಹಲ್ಲುಗಳೂ ಹುಟ್ಟಿದ್ದುವು. ಈ ವಿಚಿತ್ರ ಜನ್ಮವನ್ನು ಕೇಳಿ ಮುನಿಗಳು ಹೀಗೆ ಹಲ್ಲುಗಳೊಂದಿಗೆ ಹುಟ್ಟಿದವನು ದೇಶಕ್ಕೆ ರಾಜನಾಗುವನೆಂದು ಭವಿಷ್ಯ ಹೇಳಿದರು. ತಂದೆಯಲ್ಲಿ ಐಹಿಕ ಚಿಂತನೆಗಿಂತಲೂ ಪರತತ್ವ ಚಿಂತನೆಯೇ ಹೆಚ್ಚಾಗಿತ್ತು.

ಆದರಂತೆ ತನ್ನ ಮಗನಿಗೆ ಇಹ ಸೌಖ್ಯಗಳ ಚಿಂತೆ ಹಿಡಿಯುವುದು ಒಳ್ಳೆಯದಲ್ಲವೆಂದು ತಂದೆ ಭಾವಿಸಿದನು. ಭೋಗಭಾಗ್ಯಗಳ ಮೇಲೆ ಮನಸ್ಸು ಹರಿದರೆ ತಾನೇ ರಾಜನಾಗುವ ಆಶೆ ಬರುವುದು ? ಭವಿಷ್ಯ ವಚನದಂತೆ ಆಗಬಾರದೆಂದುಕೊಂಡು ತಂದೆ ಸಣ್ಣ ಮಗುವಿನ ಹಲ್ಲುಗಳನ್ನು ಕೀಳಿಸಿಬಿಟ್ಟನು. ಹೀಗೆ ಮಾಡಿದುದರಿಂದ ಚಾಣಕ್ಯನು ಪರೋಕ್ಷವಾಗಿಯೇ ರಾಜ್ಯಪಾಲನೆ ಮಾಡುವನೆಂದು ಮುನಿಗಳು ಮತ್ತೆಯೂ ಜ್ಯೋತಿಷ್ಯ ಹೇಳಿದರು. ಅವನ ಜಾತಕದಲ್ಲಿ ಅದು ಎಂದಿಗೂ ತಪ್ಪಲಾರದಂತೆ!

ಬೆಳೆಯುತ್ತಾ ಬರುವ ಚಾಣಕ್ಯನು ಸಮಸ್ತ ಶಾಸ್ತ್ರಗಳನ್ನೂ ಚೆನ್ನಾಗಿ ಓದಿಕೊಂಡು ದೊಡ್ಡವನಾಗಿ ಒಬ್ಬ ಬಡ ಬ್ರಾಹ್ಮಣ ಕನ್ಯೆಯನ್ನು ಮದುವೆ ಮಾಡಿಕೊಂಡನು.

ಒಂದು ಸಾರಿ ಚಾಣಕ್ಯನ ಹೆಂಡತಿ ತನ್ನ ತಮ್ಮನ ವಿವಾಹ ಸಂದರ್ಭದಲ್ಲಿ ತನ್ನ ತೌರುಮನೆಗೆ ಹೋದಳು. ಅಲ್ಲಿಗೆ ಅವಳ ಅಕ್ಕ ತಂಗಿಯರು ಕೂಡಾ ಬಂದಿದ್ದರು. ಅವರ ಗಂಡಂದಿರು ಧನಿಕರಾಗಿದ್ದ ಕಾರಣದಿಂದ ಅವರು ದೊಡ್ಡ ಸ್ಥಿತಿಗತಿಗಳಲ್ಲಿರುವವರು. ಅವರು ಚಾಣಕ್ಯನ ಹೆಂಡತಿಯ ಬಡತನವನ್ನು ಅವಹೇಳನ ಮಾಡುವಂತೆ ಪ್ರವರ್ತಿಸಿದರು.

ಆದರಿಂದ ಅವಮಾನ ಪೀಡಿತಳಾಗಿ ಮನೆಗೆ ಬಂದ ಹೆಂಡತಿಯನ್ನು ನೋಡಿ, ಚಾಣಕ್ಯನು ವಿಚಾರಿಸಿ ನಡೆದುದನ್ನು ತಿಳಿದು, ತಲೆ ನಡುಗಿಸಿ,



ಅವಡುಗಚ್ಚಿ, ಧನಾರ್ಜನೆ ಮಾಡಿಯೇ ತೀರಬೇಕೆಂದು ನಿಶ್ಚಯಿಸಿ ಮನೆಯಿಂದ ಹೊರಟನು.

ಆಗ ಪಾಟಲೀಪುತ್ರವನ್ನು ಆಳುವ ನಂದರಾಜನು ಬ್ರಾಹ್ಮಣರನ್ನು ದೊಡ್ಡ ರೀತಿಯಲ್ಲಿ ಆದರಿಸಿ ಸತ್ಕರಿಸುವನೆಂದು ಕೇಳಿ, ಚಾಣಕ್ಯನು ಪಾಟಲೀಪುತ್ರದ ರಾಜಾಸ್ಥಾನಕ್ಕೆ ಹೋಗಿ, ಅಲ್ಲಿ ಖಾಲಿಯಾಗಿದ್ದ ಅನೇಕ ಆಸನಗಳಲ್ಲಿ ಉನ್ನತವಾಗಿದ್ದ ಆಸನದ ಮೇಲೆ ಹೋಗಿ ಕುಳಿತನು. ಅದು ನಂದ ಮಹಾರಾಜನು ಕೂಡುವ ಆಸನವಾಗಿತ್ತು.

ಸ್ವಲ್ಪಹೊತ್ತಿಗೆ ನಂದರಾಜನೂ, ಅವನ ಮಗನೂ ಬಂದರು. ಅಲ್ಲಿದ್ದ ಪರಿಚಾರಿಕೆ ಚಾಣಕ್ಯನಿಗೆ ಬೇರೆ ಆಸನ ತೋರಿಸಿದಳು. ಆದರೂ ಚಾಣಕ್ಯನು ತಾನು ಕುಳಿತ ಆಸನದಿಂದ ಏಳದಿರುವುದಂತೂ ಹಾಗಿರಲಿ, ತನ್ನ ಜಲಪಾತ್ರವನ್ನು ಒಂದು ಆಸನದ ಮೇಲೆಯೂ, ತನ್ನ ಕೃಷ್ಣಾಜಿನವನ್ನು ಇನ್ನೊಂದು ಆಸನದ ಮೇಲೆಯೂ, ತನ್ನ ಯಜ್ಞೋಪವೀತವನ್ನು ಮಗದೊಂದು ಆಸನದ ಮೇಲೆಯೂ ಇರಿಸಿದನು. ಈ ಉದ್ಧಟತನವನ್ನು ಸಹಿಸಲಾಗದೆ ನಂದ ಆಜ್ಞೆಯಂತೆ ಪರಿಚಾರಿಕೆ ಚಾಣಕ್ಯನನ್ನು ಹೊಡೆದು ಎಳೆದು ಹೊರಗೆ ದೂಡಿಬಿಟ್ಟಳು.

ಚಾಣಕ್ಯನು ಹಿಡಿಸಲಾಗದಷ್ಟು ಕೋಪದಿಂದ ತಾನು ಎಂದಿಗೂ ಬಿಡದೆ, ಗರ್ವಿಷ್ಠನಾದ ನಂದ ರಾಜನನ್ನು ನಿರ್ಮೂಲ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿ, ಪಾಟಲೀಪುತ್ರವನ್ನು ಬಿಟ್ಟು ಹೊರಟು ಹೋದನು.

ಇನ್ನೊಬ್ಬರ ಮೂಲಕ ರಾಜ್ಯವನ್ನು ಪಾಲಿಸುವ ಯೋಗ ತನಗಿದೆಯೆಂದು ಅವನಿಗೆ ಗೊತ್ತಿದ್ದಿತು. ಆದುದರಿಂದ ಚಾಣಕ್ಯನು ತನ್ನ ಪ್ರತಿನಿಧಿಯಾಗಿ ರಾಜ್ಯಪಾಲನೆ ಮಾಡಲು ಯೋಗ್ಯನು ಯಾರೆಂದು ಅನ್ವೇಷಿಸಲು ತೊಡಗಿದನು. ಹಾಗೆ ಅವನು ಸಂಚಾರ ಮಾಡುತ್ತ ಮಯೂರ ಪೋಷಕರಿರುವ ಗ್ರಾಮಕ್ಕೆ ಬಂದನು.

ಈ ಮಯೂರ ಪೋಷಕರು ಮಹಾರಾಜನ ಮಯೂರಗಳನ್ನು ಪೋಷಿಸುವವರು. ಆ ಗ್ರಾಮದ ಹಿರಿಯನ ಮಗಳು ಗರ್ಭವತಿಯಾಗಿದ್ದು, ಚಂದ್ರನನ್ನು ಕುಡಿಯಬೇಕೆಂದು ಬಹಳ ಆಶೆಯಲ್ಲಿರುವಳೆಂದು ಚಾಣಕ್ಯನಿಗೆ ತಿಳಿಯಿತು. ಗರ್ಭಿಣಿಗೆ ಬಂದ ಆಶೆಯದು! ಹೇಗಾದರೂ ನೆರವೇರಿಸಲೇ ಬೇಕೆಂದು ಜನರ ನಂಬುಗೆ.

“ಅವಳಿಗೆ ಹುಟ್ಟುವ ಮಗನನ್ನು ನಾನು ಬೆಳೆಸುತ್ತೇನೆ ಎಂಬ ಷರತ್ತಿಗೆ ಒಪ್ಪಿದರೆ ಅವಳ ಆಶೆಯನ್ನು ನಾನು ತೀರಿಸುತ್ತೇನೆ” ಎಂದು ಚಾಣಕ್ಯನು ಗ್ರಾಮದ ಹಿರಿಯನೊಂದಿಗೆ ಹೇಳಿದನು. ಅದಕ್ಕೆ ಗ್ರಾಮದ ಹಿರಿಯನೂ, ಅವನ ಹೆಂಡತಿಯೂ ಒಪ್ಪಿಗೆಯನ್ನು ನೀಡಿದರು.

ಚಾಣಕ್ಯನು ಒಂದು ಗುಡಿಸಲು ಕಟ್ಟಿಸಿ, ಅದರ ಮಾಡಿನಲ್ಲಿ ಒಂದು ತೂತನ್ನು ಮಾಡಿಸಿಟ್ಟನು.

ರಾತ್ರಿಯ ಹೊತ್ತಿನಲ್ಲಿ ಚಂದ್ರಕಿರಣಗಳು ಬೀಳುವ ಸ್ಥಳದಲ್ಲಿ ಹಾಲಿನ ಪಾತ್ರವನ್ನಿಟ್ಟು, ಗರ್ಭಿಣಿಯನ್ನು ಆ ಗುಡಿಸಲಿನೊಳಗೆ ಕರೆದುಕೊಂಡು ಹೋಗಿ, "ಇಗೋ ಚಂದ್ರರಸ, ಕುಡಿದುಬಿಡು" ಎಂದನು. ಅವಳು ನಿಜವೆಂಬ ಭ್ರಮೆಯಲ್ಲಿ ಹಾಲನ್ನು ಕುಡಿಯುವಾಗ ಮಾಡಿನ ಮೇಲಿದ್ದ ಒಬ್ಬ ಮನುಷ್ಯನು ಸದ್ದು ಮಾಡದೆ ಮೆಲ್ಲನೆ ಮಾಡಿನ ತೂತನ್ನು ಕ್ರಮವಾಗಿ ಮುಚ್ಚಿಬಿಟ್ಟನು. ತಾನು ಚಂದ್ರನನ್ನೇ ಕುಡಿದೆನೆಂದು ಗರ್ಭವತಿಗೆ ತೃಪ್ತಿಯಾಯಿತು. ಈ ಕಾರಣದಿಂದ ಚಾಣಕ್ಯನು ಅವಳಿಗೆ ಹುಟ್ಟಿದ ಮಗುವಿಗೆ ಚಂದ್ರ ಗುಪ್ತನೆಂದು ಹೆಸರಿಟ್ಟನು.

ಇದು ನಡೆದ ಮೇಲೆ ಚಾಣಕ್ಯನು ಧನಾರ್ಜನೆ ಗಾಗಿ ಮತ್ತೆ ದೇಶಾಟನೆಗೆ ತೊಡಗಿದನು. ಮತ್ತೆ ಅವನು ಆ ಗ್ರಾಮಕ್ಕೆ ಹಿಂದಿರುಗಿ ಬರಲು ಕೆಲವು ವರ್ಷಗಳಾದುವು. ಬರುವಾಗ ದಾರಿಯಲ್ಲಿ ಕೆಲವು ಹುಡುಗರು ಕಾಣಿಸಿದರು. ಅವರಲ್ಲಿ ಚಂದ್ರಗುಪ್ತನೂ ಇದ್ದನು. ಆಟದಲ್ಲಿ ಅವನು ರಾಜನ ಹಾಗೆ ನಟಿಸುತ್ತಿದ್ದನು. ಉಳಿದವರು ಅವನನ್ನು ರಾಜನೆಂದು ಭಾವಿಸಿ ವಿನಯ ವಿಧೇಯತೆಗಳಿಂದ ನಡೆದುಕೊಂಡಿದ್ದರು. ಚಾಣಕ್ಯನು ಚಂದ್ರಗುಪ್ತನನ್ನು ಗುರುತಿಸಲಿಲ್ಲ. ಆದರೆ ಅವನನ್ನು ನೋಡಿ ಆಶ್ಚರ್ಯಪಡುತ್ತ, ಅವನ ಶಕ್ತಿಯನ್ನು ಪರೀಕ್ಷಿಸಲು, "ಮಹಾರಾಜಾ, ನನಗೇನಾದರೂ ದಾನಕೊಡು" ಎಂದು ಕೇಳಿ ಕೈಯನ್ನು ನೀಡಿದನು.

"ಬ್ರಾಹ್ಮಣೋತ್ತಮರೇ, ಅಲ್ಲಿ ಕಾಣುವ ಹಸುವಿನ ಮಂದೆಯನ್ನು ಕೊಟ್ಟಿದ್ದೇನೆ. ತೆಗೆದುಕೊಂಡು ಹೋಗಿರಿ. ನಾನು ಹೇಳಿದೆನೆಂದರೆ ಯಾರೂ ತಡೆಯುವುದಿಲ್ಲ. ಇದು ನನ್ನ ಆಜ್ಞೆ!" ಎಂದನು ಹುಡುಗ ಚಂದ್ರಗುಪ್ತ.

ಚಾಣಕ್ಯನು ಸಂತೋಷಪಟ್ಟು, ಆ ಹುಡುಗನೇ ಚಂದ್ರಗುಪ್ತನೆಂದು ಬೇರೆ ಹುಡುಗರ ಮೂಲಕ



ತಿಳಿದುಕೊಂಡನು. "ಏನಪ್ಪಾ, ನೀನು ರಾಜನಾದರೆ ನಿನಗೆ ರಾಜ್ಯವು ಬೇಕಲ್ಲವೆ? ನಾನು ಕೊಡಿಸುತ್ತೇನೆ. ನನ್ನೊಂದಿಗೆ ಬಾರಪ್ಪಾ" ಎಂದು ಅವನು ಮೊದಲೇ ಮಾಡಿಕೊಂಡ ಒಪ್ಪಂದದಂತೆ ಅವನ ತಂದೆ ತಾಯಿಗಳನ್ನು ಒಪ್ಪಿಸಿ ಚಂದ್ರಗುಪ್ತನನ್ನು ತನ್ನೊಂದಿಗೆ ಕರೆದುಕೊಂಡು ಹೋದನು. ಇಬ್ಬರೊಳಗೆ ಗುರು ಶಿಷ್ಯ ಭಾವ ಬಲಿಯಿತು.

ಚಾಣಕ್ಯನು ತಾನು ಸಂಪಾದಿಸಿದ ಧನದಿಂದ ಒಂದು ಸೈನ್ಯದ ಗುಂಪನ್ನು ತಯಾರಿಸಿ, ಆ ಸೈನ್ಯವನ್ನು ಸಾಗಿಸಿಕೊಂಡು ಹೋಗಿ ಪಾಟಲೀಪುತ್ರವನ್ನು ಮುತ್ತಿಗೆ ಹಾಕಿದನು. ಆದರೆ ಬಲವಾದ ಶತ್ರು ಸೇನೆಗಳು ಚಾಣಕ್ಯನ ಸೇನೆಯನ್ನು ಅವಲೀಲೆಯಾಗಿ ಚೆದರಿಸಿ ಓಡಿಸಿಬಿಟ್ಟುವು.

ಚಂದ್ರಗುಪ್ತನನ್ನೂ ಹಿಡಿಯಲು ಸೈನಿಕರು ಬರುತ್ತಿದ್ದರು. ಆಗ ಚಾಣಕ್ಯನು ಒಂದು ಉಪಾಯ ಮಾಡಿದನು. ತಾನು ತಪಸ್ವಿಯ ಹಾಗೆ ಸರೋವರದ



ತೀರದಲ್ಲಿ ಕುಳಿತು, ಚಂದ್ರಗುಪ್ತನನ್ನು ಸರೋವರದ ನೀರಿಗಿಳಿಯಲು ಹೇಳಿದನು.

ಅಶ್ವಿಕನೊಬ್ಬನು ಚಾಣಕ್ಯನಿರುವ ಸ್ಥಳಕ್ಕೆ ಬಂದು "ಈ ದಾರಿಯಾಗಿ ಯಾರಾದರೂ ಓಡುತ್ತಾ ಬಂದರೇ ?" ಎಂದು ಚಾಣಕ್ಯನನ್ನು ಕೇಳಿದನು. ಚಾಣಕ್ಯನು ನೀರಿನಲ್ಲಿರುವ ಚಂದ್ರಗುಪ್ತನನ್ನು ತೋರಿಸಿದನು.

ಕೂಡಲೇ ಸೈನಿಕನು ಕುದುರೆಯಿಂದಿಳಿದು, ತನ್ನ ಕತ್ತಿಯನ್ನು ಪಕ್ಕದಲ್ಲಿಟ್ಟು, ನೀರಿನಲ್ಲಿ ಇಳಿಯಲು ಕವಚವನ್ನು ಬಿಚ್ಚಲು ತೊಡಗಿದನು. ಆ ಸಮಯದಲ್ಲಿ ಚಾಣಕ್ಯನು ಮಿಂಚಿನಂತೆ ಎದ್ದು ಅವನ ಕತ್ತಿಯನ್ನು ಎತ್ತಿಕೊಂಡು ಅವನ ಕುತ್ತಿಗೆಯನ್ನು ಕಡಿದುಬಿಟ್ಟನು.

ತರುವಾಯ ಚಾಣಕ್ಯನೂ ಚಂದ್ರಗುಪ್ತನೂ ಆ ಸೈನಿಕನ ಕುದುರೆಯ ಮೇಲೆ ಏರಿ ಪಲಾಯನ ಮಾಡಲು ತೊಡಗಿದರು. ಆಗ ಚಾಣಕ್ಯನು ಚಂದ್ರಗುಪ್ತನೊಂದಿಗೆ, "ಆ ಸೈನಿಕನು ನೀರಿನಲ್ಲಿ ನಿನ್ನನ್ನು ನೋಡಿದಾಗ ನಿನಗೆ ಏನು ಅನಿಸಿತು ?" ಎಂದು ಕೇಳಿದನು.

"ನಿಮ್ಮ ಮಾತಿನಂತೆ ನಡೆದಿದ್ದೇನೆ. ಕರ್ತವ್ಯವೇನೆಂದು ಗುರುಗಳಿಗೆ ಗೊತ್ತಿರುತ್ತದೆ ಎಂದುಕೊಂಡೆನು" ಎಂದನು ಚಂದ್ರಗುಪ್ತ.

ಈ ಮಾತನ್ನು ಕೇಳಿ, ಚಂದ್ರಗುಪ್ತನು ರಾಜನಾಗಿ, ತಾನು ಮಂತ್ರಿಯಾದರೂ, ಅವನು ತನಗೆ ವಿಧೇಯನಾಗಿಯೇ ಇರುತ್ತಾನೆಂದು ಚಾಣಕ್ಯನು ತಿಳಿದುಕೊಂಡನು.

ಅಷ್ಟರಲ್ಲಿ ಮತ್ತೊಬ್ಬ ಕುದುರೆ ಸವಾರನು ಅವರನ್ನು ಓಡಿಸಿಕೊಂಡು ಬಂದನು. ಚಾಣಕ್ಯನು ಅವನನ್ನು ಕೂಡಾ ಯುಕ್ತಿಯಿಂದ ಕೊಂದುಬಿಟ್ಟನು. ಅದು ಹೇಗೆಂದರೆ, ಅಶ್ವಿಕನು ದೂರದಲ್ಲಿ ಬರುವುದು ಕಾಣುತ್ತಲೇ ಚಾಣಕ್ಯನು ಸರೋವರದಲ್ಲಿ ಬಟ್ಟೆ ಒಗೆಯುವ ಅಗಸನನ್ನು ನೋಡಿ, "ಮಹಾರಾಜರು ಅಗಸರ ಮೇಲೆ ಕೋಪಿಸಿ ನಿನ್ನನ್ನು ಹಿಡಿಯಲು ಸೈನಿಕನನ್ನು ಕಳಿಸಿದ್ದಾರೆ" ಎಂದು ಹೆದರಿಸಿ ಅವನನ್ನು ಓಡಿಸಿಬಿಟ್ಟನು. ಆಮೇಲೆ ಅವನ ಸ್ಥಾನದಲ್ಲಿ ತಾನು ಕೆಲಸಮಾಡಿಕೊಂಡು, ಚಂದ್ರಗುಪ್ತನನ್ನು ನೀರಿಗಿಳಿಸಿದನು. ಆನಂತರ ಮೊದಲನೆಯವನಂತೆ ಎರಡನೆಯ ಅಶ್ವಿಕನೂ ಚಾಣಕ್ಯನ ಕೈಯಿಂದ ಸತ್ತು ಬಿದ್ದನು. ಚಂದ್ರಗುಪ್ತ ಚಾಣಕ್ಯರು ಅಲ್ಲಿಂದ ಮುಂದೆ ಪಲಾಯನ ಸಾಗಿಸಿದರು.

ಹಸಿವಿನಿಂದ ಸಂಕಟಪಡುತ್ತ, ಅವರಿಬ್ಬರೂ ಸಾಯಂಕಾಲದ ಹೊತ್ತಿಗೆ ಗ್ರಾಮವನ್ನು ತಲುಪಿದರು. ತಮಗೆ ಯಾರು ಒಂದಿಷ್ಟು ಆಹಾರ ಕೊಡುವರೆಂದು ನೋಡುತ್ತ ಅವರು ಗ್ರಾಮದಲ್ಲಿ ನಡೆಯುತ್ತಿರಲು, ಒಂದು ಮನೆಯಲ್ಲಿ ಒಂದು ವಿಷಯವು ನಡೆಯುವುದು ಕಂಡಿತು. ವಯಸ್ಸಾದ ಬಡ ಹೆಂಗುಸೊಬ್ಬಳು ತನ್ನ ಮಕ್ಕಳಿಗಾಗಿ ಅಡಿಗೆಮಾಡಿ ತಟ್ಟೆ

ಗಳಿಗೆ ಬಡಿಸಿದಳು. ಒಬ್ಬ ಹುಡುಗನು ಆತುರ ದಿಂದ ಅನ್ನದಲ್ಲಿ ಕೈಹಾಕಿ ಸುಟ್ಟುಕೊಂಡು ಕಿರಿಚಿದನು. ಆಗ ಅವನ ತಾಯಿ, "ನೀನೊಬ್ಬ! ಆ ಚಾಣಕ್ಯನ ಹಾಗೇ ಮಂದಬುದ್ಧಿ!" ಎಂದಳು.

ಗುರುತು ಪರಿಚಯವೇನಿಲ್ಲದ ಆ ಬಡ ಹೆಂಗುಸು ತನ್ನನ್ನು ಕುರಿತು ಅಂಥಾ ಮಾತು ಹೇಳಿದುದನ್ನು ಕೇಳಿ, ಚಾಣಕ್ಯನು ಆ ಮನೆಯೊಳಗೆ ಪ್ರವೇಶಿಸಿ ಹಾಗೆ ಹೇಳಲು ಕಾರಣವೇನೆಂದು ಆ ಹೆಂಗುಸಿ ನೊಂದಿಗೆ ಕೇಳಿದನು.

"ಒಂದು ಕಡೆಯಿಂದ ಬಿಸಿ . ತಣಿಯುವ ಅನ್ನ ವನ್ನು ತಿನ್ನುತ್ತಾ ಬರದೆ ಇವನು ಆತುರದಿಂದ ತಟ್ಟೆಯ ನಡುವಿಗೇ ಕೈಹಾಕಿ ಸುಟ್ಟುಕೊಂಡಿದ್ದಾನೆ. ಆ ಚಾಣಕ್ಯ ಕೂಡಾ ಇಂತಹ ಬುದ್ಧಿಗೇಡು ಕೆಲಸ ತಾನೇ ಮಾಡಿದ? ಪರಿಸರಗಳಲ್ಲಿ ಯುದ್ಧಮಾಡಿ ಸ್ವಲ್ಪ ಸ್ವಲ್ಪ ಜಯಿಸುತ್ತಾ ಹೋಗುವುದನ್ನು ಬಿಟ್ಟು, ಒಮ್ಮೆಗೇ ರಾಜಧಾನಿಯನ್ನೇ ಮುತ್ತಿದ ನಲ್ಲವ್ವಾ! ಅದು ಆತುರದ ವಿಪರೀತತನವಲ್ಲವೇ?" ಎಂದಳು ಆ ಬಡವೆ.

ಆ ಮಾತು ಚಾಣಕ್ಯನಿಗೆ ಒಳ್ಳೆಯ ನೀತಿ ಪಾಠ ವಾಯಿತು. ಅವನು ಹಿಮವತ್ಪರ್ವತಕ್ಕೆ ಹೋಗಿ ಆ ರಾಜ್ಯವನ್ನಾಳುವ ಪರ್ವತನೆಂಬ ರಾಜನೊಂದಿಗೆ ಒಂದು ಒಡಂಬಡಿಕೆ ಮಾಡಿಕೊಂಡನು. ಆ ಒಡಂಬಡಿಕೆಯಂತೆ ಪರ್ವತ ರಾಜನು ನಂದ ರಾಜ ನನ್ನು ಜಯಿಸಲು ಚಾಣಕ್ಯನಿಗೆ ಸಹಾಯ ಮಾಡ ಬೇಕು. ಪ್ರತಿಫಲವಾಗಿ ಸೋತುಹೋದ ನಂದನ ರಾಜ್ಯದ ಅರ್ಧ ಭಾಗಕ್ಕೆ ಪರ್ವತ ರಾಜನು ಒಡೆಯನಾಗುತ್ತಾನೆ.

ಈ ಒಪ್ಪಂದದ ಪ್ರಕಾರ ಚಾಣಕ್ಯನೂ ಪರ್ವತನೂ ಒಂದಾಗಿ ಪಾಟಲೀಪುತ್ರದ ಪರಿಸರ ಪ್ರಾಂತಗಳನ್ನೆಲ್ಲಾ ಜಯಿಸಿಕೊಂಡು ಬಂದರು. ಒಂದು ನಗರವು ಅವರ ಬಲಕ್ಕೆ ಬಗ್ಗದೆ ಬಲವಾಗಿ ನಿಂತಿತು. ಅದನ್ನು



ಜಯಿಸುವ ಮಾರ್ಗವೇನೆಂದು ಚಾಣಕ್ಯನು ಒಂದು ಉಪಾಯ ಮಾಡಿದನು. ಅವನು ತ್ರಿದಂಡಿ ಸನ್ಯಾಸಿಯ ವೇಷ ಧರಿಸಿ, ಆ ನಗರದೊಳಗೆ ಪ್ರವೇಶ ಮಾಡಿದನು.

ನಗರದಲ್ಲಿ ಸಪ್ತ ಮಾತೃಕಾಲಯ ವಿದ್ದಿತು. ಆಲಯದೊಳಗಿರುವ ಏಳು ಮಂದಿ ದೇವತೆಗಳೂ ಆ ನಗರವನ್ನು ರಕ್ಷಿಸುವರೆಂದು ಅಲ್ಲಿಯ ಪ್ರಜೆಗಳಿಗೆ ವಿಶ್ವಾಸವಿದ್ದಿತು. ಶತ್ರುಗಳ ಮುತ್ತಿಗೆಯಿಂದ ಬೇಸತ್ತು ಕಷ್ಟಪಡುತ್ತಿದ್ದ ಕೆಲ ಮಂದಿ ಪ್ರಜೆಗಳು ಸನ್ಯಾಸಿ ವೇಷದ ಚಾಣಕ್ಯನನ್ನು ನೋಡಿ, "ಸ್ವಾಮಿ, ಈ ಮುತ್ತಿಗೆ ಯಾವಾಗ ತೊಲಗಿಹೋಗುತ್ತದೆ?" ಎಂದು ಕೇಳಿದರು.

"ಅಯ್ಯಾ, ಅಪ್ಪಗಳಿರಾ! ಈ ಸಪ್ತ ಮಾತೃಕೆ ಯರು ಆಲಯವನ್ನು ಬಿಟ್ಟು ಹೋದರೆ ಹೊರತು ಈ ಮುತ್ತಿಗೆ ಹೋಗುವುದಿಲ್ಲ" ಎಂದು ಚಾಣಕ್ಯನು ಅವರೊಂದಿಗೆ ಹೇಳಿದನು.

ಮೂಢರಾದ ಆ ಪೌರರು ಅವನ ಮಾತನ್ನು ನಂಬಿ, ಆಲಯದೊಳಗಿನ ಸಪ್ತ ಮಾತೃಕೆಯರ ವಿಗ್ರಹಗಳನ್ನು ತೊಲಗಿಸಿಬಿಟ್ಟರು.

ಕೂಡಲೇ ಚಂದ್ರಗುಪ್ತನಿಗೂ, ಪರ್ವತ ರಾಜನಿಗೂ ಚಾಣಕ್ಯನ ಸಂದೇಶ ಹೋಯಿತು. ಅವರು ಮುತ್ತಿಗೆ ಸಾಕುಮಾಡಿ, ಹಿಂದಿರುಗಿ ಹೋಗುವಂತೆ ಸ್ವಲ್ಪದೂರ ಹೋಗಿಬಿಟ್ಟರು. ನಗರವಾಸಿಗಳು ಮುತ್ತಿಗೆ ಹೋಯಿತೆಂದು ಬಹಳ ಸಂತೋಷಪಟ್ಟು, ಉತ್ಸಾಹದಿಂದ ಮುಳುಗಿ ತೇಲಿಕೊಂಡಿದ್ದ ಸಮಯದಲ್ಲಿ, ಒಮ್ಮೆಗೇ ಧಾವಿಸಿ ಬಂದು ಬಿದ್ದ ಚಂದ್ರಗುಪ್ತ, ಪರ್ವತರ ಸೇನೆಗಳು ನಗರವನ್ನು ವಶಪಡಿಸಿಕೊಂಡುವು.

ಅನಂತರ ಚಾಣಕ್ಯನು ಪಾಟಲೀಪುತ್ರದ ಮೇಲೆ ದಂಡೆತ್ತಿಕೊಂಡು ಹೋದನು. ಈ ಸಾರಿ ನಡೆದ ಯುದ್ಧದಲ್ಲಿ ನಂದನು ಸೋತು ಚಾಣಕ್ಯನಿಗೆ ಶರಣಾದನು. ಚಾಣಕ್ಯನು ನಂದನನ್ನು ಜೀವದೊಂದಿಗೆ ಬಿಡುತ್ತ, "ನೀನು ದೇಶವನ್ನೇ ಬಿಟ್ಟು ಹೋಗಬೇಕು. ಒಂದು ರಥದಲ್ಲಿ ತೆಗೆದುಕೊಂಡು ಹೋಗಬಹುದಾದಷ್ಟು ಸಂಪತ್ತನ್ನು ಮಾತ್ರ ನಿನ್ನೊಂದಿಗೆ ಒಯ್ಯಬಹುದು" ಎಂದನು.

ಆ ಪ್ರಕಾರವಾಗಿ ನಂದನು ರಥದ ಮೇಲೆ ತನ್ನ ಇಬ್ಬರು ಪತ್ನಿಯರನ್ನೂ ಮಗಳನ್ನೂ ಏರಿಸಿಕೊಂಡು, ಅಮೂಲ್ಯ ನಗಳೇ ಮೊದಲಾದುವನ್ನು ತೆಗೆದುಕೊಂಡು ಹೊರಟನು.

ಹಾಗೆ ಅವರು ಸ್ವಲ್ಪ ದೂರ ಹೋದಾಗ ದಾರಿಯಲ್ಲಿ ರಥದ ಮೇಲೆ ಚಂದ್ರಗುಪ್ತನು ಇದಿರಾಗಿ ಬಂದನು. ಅವನನ್ನು ನೋಡಿ ನಂದನ ಕುಮಾರಿ ದುರ್ಧರೆಗೆ ಗಾಢವಾದ ಪ್ರೇಮ ಉಂಟಾಯಿತು. ಮಗಳ ಮನೋಭಾವವನ್ನು ತಿಳಿದು ನಂದನು ಅವಳೊಂದಿಗೆ, "ಮಗಳೇ, ನೀನು ಸ್ವಯಂವರ ಮಾಡಿಕೊಳ್ಳುವುದಾದರೆ ನನ್ನಿಂದೇನೂ ಅಡ್ಡಿಯಿಲ್ಲ" ಎಂದನು.

ತಂದೆ ಹಾಗೆ ಹೇಳಿದ ಕೂಡಲೇ ದುರ್ಧರಾದೇವಿ ತಂದೆಯ ರಥದಿಂದ ಇಳಿದು ಚಂದ್ರಗುಪ್ತನ ರಥವನ್ನು ಏರಿದಳು. ಅವಳು ಚಂದ್ರಗುಪ್ತನ ರಥವನ್ನು ಏರುವಾಗ ರಥಚಕ್ರದ ಒಂಬತ್ತು ಕೀಲ್ಗಂಡುಗಳು ಲಟಲಟನೆ ಮುರಿದುವು. ಈ ಶಕುನವನ್ನು ನೋಡಿ ಚಂದ್ರಗುಪ್ತನು ದುರ್ಧರೆಯನ್ನು ನಿರಾಕರಿಸಲು ನೋಡಿದನು.

ಆಗ ಚಾಣಕ್ಯನು ಅವನನ್ನು ತಡೆದು, "ಇದು ಒಳ್ಳೆಯ ಶಕುನವೆಂದು ತಿಳಿ. ನಿನ್ನ ವಂಶದವರು ಒಂಬತ್ತು ತಲೆಗಳವರೆಗೆ ರಾಜ್ಯಪಾಲನೆ ಮಾಡುವರೆಂದು ಇದರ ಅರ್ಥ" ಎಂದನು.

[ಮುಂದಿನ ಸಂಚಿಕೆಯಲ್ಲಿ ಮುಗಿಯುತ್ತದೆ]





# ಜಡಿಮಳೆಯ ಕಳ್ಳ

ಒಂದು ಸಾರಿ ಬಸ್ರಾ ದೇಶ ಪಾಲಕನಾದ ಸುಲ್ತಾನ ಅಮೀರನ ಬಳಿಗೆ, ನಗರದ ಕೋತ್ವಾಲನು ಒಬ್ಬ ಯುವಕನನ್ನು ಕರೆದುಕೊಂಡು ಬಂದು, "ಮಹಾ ಪ್ರಭೂ, ಇವನು ತುಂಬಾ ನಿಪುಣನಾದ ಪಕ್ಕಾ ಕಳ್ಳ. ರಾತ್ರಿಯಲ್ಲಿ ಜಡಿಮಳೆ ಸುರಿಯುತ್ತಿದ್ದಾಗ, ನಮ್ಮ ನಗರದ ಶ್ರೀಮಂತರಲ್ಲೊಬ್ಬರಾದ ದಾವೂದ್ ಖಾನರ ಮನೆಯೊಳಗೆ ಪ್ರವೇಶಿಸಿ ಕಳ್ಳತನ ಮಾಡುವಾಗ ಸಿಕ್ಕಿ ಬಿದ್ದುಬಿಟ್ಟ. ಏನೂ ಅರಿಯದ ಸಾಧುವಿನ ಹಾಗೆ ಕಾಣುತ್ತಾನೆ" ಎಂದು ಹೇಳಿದನು.

ಅಮೀರನು ಯುವಕನನ್ನು ತಿರಸ್ಕಾರದಿಂದ ನೋಡಿ, ಏಕೋ ಥಕ್ಕನೆ ಆಶ್ಚರ್ಯಕ್ಕೆ ಬಿದ್ದನು. ಅವನಲ್ಲಿ ಕಳ್ಳತನದ ಲಕ್ಷಣಗಳೇನೂ ಕಾಣದೆ, ನಿರ್ಲಕ್ಷ್ಯತೆಯು ಧೈರ್ಯವೇ ತುಂಬಿದಂತೆ ಕಂಡಿತು. ಏನೂ ಅರಿಯದ ಸಾಧುವಿನ ಲಕ್ಷಣವಾವುದೂ ಕಾಣಲಿಲ್ಲ.

"ನಿಜ ಹೇಳು. ಕಳ್ಳತನ ಮಾಡಬೇಕೆಂತಲೇ ನೀನು ಆ ಮನೆಯೊಳಗೆ ಪ್ರವೇಶ ಮಾಡಿದಿ ಯೆಂಬುದು ನಿಜವೇನಾ ?" ಎಂದು ಅಮೀರನು ಯುವಕನನ್ನು ಪ್ರಶ್ನಿಸಿದನು.

"ಹೌದು ಪ್ರಭುಗಳೇ ! ಅದೆ ನಿಜ" ಎಂದನು ಯುವಕ ವಿನಯದಿಂದ.

"ಹಾಗೇನು ? ಹಾಗಾದರೆ ನಿನ್ನ ಅಪರಾಧಕ್ಕೆ ಶಿಕ್ಷೆ ಏನೆಂದು ಗೊತ್ತಿದೆಯೆ ? ಕಳ್ಳತನಕ್ಕೆ ಉಪ ಯೋಗವಾಗುವ ನಿನ್ನ ಎರಡು ಕೈಗಳನ್ನು ಖಂಡಿಸು ವುದೇ !" ಎಂದನು ಅಮೀರ.

ಯುವಕನು ತಲೆಯಾಡಿಸಿ ಸುಮ್ಮನಾದನು.

ಅವನಿಗೆ ತಾನು ನಿರ್ದೋಷಿ ಎಂದು ಹೇಳಿ ಕೊಳ್ಳಲು ಇಷ್ಟವಿಲ್ಲವೆಂಬುದನ್ನು ಅಮೀರನು ಅರಿತುಕೊಂಡನು. ಅಂತಹ ವೈರಾಗ್ಯ ಬರಲು ಬೇರೆ ಏನೋ ಕಾರಣವಿರಲೇಬೇಕು.

"ಸರಿ. ಈಗ ಇವನನ್ನು ಒಯ್ದು ಖೈದಿನಲ್ಲಿಡು. ನಾಳೆ ಶಿಕ್ಷೆಯನ್ನು ಅಮಲುಪಡಿಸುತ್ತೇನೆ. ಅಷ್ಟರ ವರೆಗೆ ಯೋಚನೆ ಮಾಡಲಿ" ಎಂದು ಅಮೀರನು ಕೋತ್ವಾಲನಿಗೆ ಆಜ್ಞೆ ಮಾಡಿದನು.

ಆ ದಿನ ರಾತ್ರಿ ಅಮೀರನು ಖೈದಿಗಳಿರುವ ಶಾಲೆಯ ಕಡೆಗೆ ಹೋದನು. ಅಲ್ಲಿ ಅವನಿಗೆ ಯಾರೋ ಸುಶ್ರಾವ್ಯವಾಗಿ ಹಾಡುವ ಧ್ವನಿ ಕೇಳಿ ಸಿತು. ಅಮೀರನು ಆ ದಿಕ್ಕಿಗೇ ಹೋಗಿ, ಹಾಗೆ

ಅರೇಬಿಯಾ ಕಥೆ



ಹಾಡುತ್ತಿರುವುದು ನಾಳೆ ಶಿಕ್ಷೆ ಪಡೆಯಲಿರುವ ಯುವಕನೆಂದು ತಿಳಿದು, ಅವನ ಸಂತೋಷದ ಹಾಡಿಗೆ ಆಶ್ಚರ್ಯಪಟ್ಟನು.

ಅಮೀರನು ಅವನ ಹತ್ತಿರಕ್ಕೆ ಹೋಗಿ, "ನಾನು ಎಷ್ಟೋ ಕಳ್ಳರನ್ನು ನೋಡಿದ್ದೇನೆ. ನೀನು ಕಳ್ಳನಲ್ಲವೆಂದು ನನಗೆ ಅನುಮಾನವಾಗಿದೆ. ನಾಳೆ ನಿನ್ನ ಕೈಗಳನ್ನು ಕಡಿಯಲು ವಧಾಸ್ಥಾನಕ್ಕೆ ಕರೆದುಕೊಂಡು ಹೋಗುವಾಗ ಅಲ್ಲಿ ಸೇರಿದ ಜನರ ಇದಿರಿನಲ್ಲಿ ಮತ್ತೊಂದು ಸಾರಿ ಪ್ರಶ್ನಿಸುತ್ತೇನೆ. ಆ ಶ್ರೀಮಂತನ ಮನೆಗೆ ಕಳ್ಳತನಕ್ಕಾಗಿ ಹೋದುದು ಅಲ್ಲವೆಂದು, ಮತ್ತೇತಕ್ಕಾಗಿಯೋ ಹೋದೆನೆಂದು ಹೇಳು. ಆ ಸಣ್ಣ ತಪ್ಪಿಗೆ ನಿನ್ನನ್ನು ಒಂದು ತಿಂಗಳು ಕೈದಿನಲ್ಲಿರಿಸಿ, ಬಿಡುಗಡೆ ಮಾಡುತ್ತೇನೆ. ಸುಮ್ಮನೆ ಕೈ ಕಡಿಸಿ ನರಳಬೇಡ" ಎಂದನು.

"ಪ್ರಭೂ! ತಮ್ಮ ದಯೆಗೆ ತುಂಬಾ ಕೃತಜ್ಞತೆಗಳು" ಎಂದನು ಯುವಕ.

ಅವನು ತನ್ನ ಸಲಹೆಯ ಪ್ರಕಾರವೇ ಹೇಳುತ್ತಾನೆಂಬ ನಂಬುಗೆ ಅಮೀರನಿಗಾಯಿತು. ಮರುದಿನ ಅವನ ಶಿಕ್ಷೆ ಅಮಲಾಗುತ್ತದೆಂದು ತಿಳಿದು ನಗರ ವಾಸಿಗಳು ಸಾವಿರ ಸಂಖ್ಯೆಯಲ್ಲಿ ವಧಾಸ್ಥಾನಕ್ಕೆ ಬಂದು ಸೇರಿದರು. ಅಮೀರನೂ ಇತರ ಉದ್ಯೋಗಸ್ಥರೂ ಬಂದು ತಕ್ಕ ತಕ್ಕ ಉನ್ನತಾಸನಗಳ ಮೇಲೆ ಆಸೀನರಾಗಿದ್ದರು. ಭಟರು ಯುವಕನನ್ನು ತಂದು ಅಲ್ಲಿ ನಿಲ್ಲಿಸಿದರು.

ಆಗ ಅಮೀರ್ ದೊಡ್ಡ ಕಂಠಸ್ವರದಲ್ಲಿ ಯುವಕನನ್ನು ನೋಡಿ, "ಎಲೋ ಯುವಕನೇ! ನೀನು ಆ ಮನೆಯೊಳಗೆ ಪ್ರವೇಶಿಸಿದ್ದು ಬೇರೆ ಏನೋ ಕೆಲಸಕ್ಕಲ್ಲದೆ ಕಳ್ಳತನ ಮಾಡಲಿಕ್ಕೆ ಅಲ್ಲವಷ್ಟೆ? ಆ ಮನೆಯಲ್ಲಿ ಪರಿಚಿತರಾಗಿದ್ದ ಯಾರೊಂದಿಗೋ ಅಗತ್ಯವಾದ ಕೆಲಸವಿದ್ದೇ ಹಾಗೆ ಹೋಗಿರುವೆ, ಹೌದಾ?" ಎಂದು ಪ್ರಶ್ನಿಸಿದನು.

"ಪ್ರಭೂ, ಕಳ್ಳತನ ಮಾಡುವುದರ ಹೊರತು ಆ ಮನೆಯಲ್ಲಿ ನನಗೆ ಬೇರೆ ಯಾವ ಕೆಲಸವೂ ಇಲ್ಲ" ಎಂದನು ಯುವಕ.

ಆ ಉತ್ತರವನ್ನು ಕೇಳಿ ಅಮೀರ್ ರೇಗಿಕೊಂಡನು. ಶಿಕ್ಷೆಯಿಂದ ತಪ್ಪಿಸಲಿಕ್ಕಾಗಿ ತಾನು ಹೇಳಿದ ಸಲಹೆಯನ್ನು ವೃಥಾ ಮಾಡಿಬಿಟ್ಟನು. ಇವನು ಕೇವಲ ಮೂರ್ಖನಾಗಿರಬೇಕು. ಅಥವಾ ಹುಚ್ಚನಾಗಿರಬೇಕು ಎನಿಸಿತು ಅಮೀರನಿಗೆ. ಇನ್ನು ಶಿಕ್ಷೆಗೆ ತಡೆ ಮಾಡಲು ಯಾವ ಕಾರಣವೂ ಇರಲಿಲ್ಲ.

"ಸರಿ. ಇವನ ಕೈಗಳೆರಡನ್ನೂ ಖಂಡಿಸಿಬಿಡಿ" ಎಂದು ಆಜ್ಞೆ ಮಾಡಿದನು ಅಮೀರ್.

ಒಬ್ಬ ಭಟನು ಕತ್ತಿ ಎತ್ತಿಕೊಂಡು ಅವನನ್ನು ಸಮೀಪಿಸುವಾಗ, ಜನರ ಮಧ್ಯದಿಂದ ಯುವತಿಯೊಬ್ಬಳು ಎದ್ದು ವೇಗವಾಗಿ ವೇದಿಕೆಯ ಬಳಿಗೆ ಹೋಗಿ, ಆ ಯುವಕನಿಗೂ, ಕತ್ತಿ ಎತ್ತಿದ ಭಟನಿಗೂ ನಡುವೆ ನಿಂತುಕೊಂಡು "ಬೇಕಾದರೆ ನನ್ನ ಕೈಗಳನ್ನು

ಕಡಿಯಿರಿ. ಈ ಯುವಕನು ಸುಳ್ಳು ಹೇಳುತ್ತಿದ್ದಾನೆ" ಎಂದಳು ನಡುಗುವ ತೀವ್ರ ಸ್ವರದಿಂದ.

ಅಧಿಕಾರನು ಭಟನನ್ನು ದೂರ ಹೋಗಲು ಹೇಳಿ, ಕಣ್ಣೀರು ತುಂಬಿದ ಆ ಯುವತಿಯನ್ನು ನೋಡಿ, "ನೀನು ನಿಜವಾಗಿ ಏನು ನಡೆಯಿತೆಂಬುದನ್ನು ಹೇಳಬಲ್ಲೆಯಾ ? ನಿಜವು ಬಯಲಾಗಬೇಕಾದುದೇ ನನಗೆ ಮುಖ್ಯ" ಎಂದು ಕೇಳಿದನು.

ಆಗ ಯುವತಿ ಕಣ್ಣೀರು ಒರೆಸಿಕೊಂಡು ಹೀಗೆ ಹೇಳಿದಳು : ಅದರ ವಿವರ ಏನೆಂದರೆ, ಕೆಲವು ವರ್ಷಗಳ ಹಿಂದೆ ಅವಳ ಕುಟುಂಬವು ಬಸ್ರಾದಲ್ಲಿರಲಿಲ್ಲ, ಬೇರೊಂದು ನಗರದಲ್ಲಿತ್ತು. ಅಲ್ಲಿ ಅವರು ವಾಸ ಮಾಡುವ ಮನೆಯ ಹತ್ತಿರ ಒಬ್ಬ ಧನಿಕನ ಭವನ ವಿದ್ದಿತು. ಈ ಯುವಕನು ಆ ಧನಿಕನ ಕುಮಾರನೇ. ಅವಳ ಕುಟುಂಬಕ್ಕೂ ಧನಿಕನ ಕುಟುಂಬಕ್ಕೂ ನಡುವೆ ಒಳ್ಳೆಯ ಸ್ನೇಹ ಸಂಬಂಧಗಳಿದ್ದ ಕಾರಣದಿಂದ ಅವಳನ್ನು ಆ ಯುವಕನಿಗೆ ಕೊಟ್ಟು ಮದುವೆ ಮಾಡಬೇಕೆಂದು ಹಿರಿಯರೆಲ್ಲರು ಆಲೋಚಿಸಿಕೊಂಡಿದ್ದರು.

ಆದರೆ ಅಕಸ್ಮಾತ್ತಾಗಿ ಯುವತಿಯ ಕುಟುಂಬವು ಬಸ್ರಾ ಪಟ್ಟಣಕ್ಕೆ ಬಂದು ಸ್ಥಿರಪಟ್ಟಿತು. ಯುವಕನ ಕುಟುಂಬವು ಏನೋ ಕಾರಣದಿಂದ ಆರ್ಥಿಕವಾಗಿ ಬಹಳ ಬಡತನದ ಸ್ಥಿತಿಗೆ ಬಂದಿತು. ಎರಡು ಕುಟುಂಬಗಳ ನಡುವೆ ಬರುಹೋಗುವಿಕೆಗಳೂ ಇಲ್ಲದೆ ಹೋಯಿತು.

ಯುವಕನು ಎರಡು ದಿನಗಳ ಕೆಳಗೆ ಏನೋ ಕೆಲಸದ ನಿಮಿತ್ತದಿಂದ ಬಸ್ರಾಕ್ಕೆ ಬಂದನು. ರಾತ್ರಿ ಅವನು ತಾನು ತಂಗಿರುವ ಸತ್ರಕ್ಕೆ ಹೋಗುವಾಗ ಮಿಂಚು, ಗುಡುಗು, ಸಿಡಿಲುಗಳು ಶುರುವಾಗಿ ಜಡಿ ಮಳೆ ಪ್ರಾರಂಭವಾಯಿತು. ಯುವಕನು ಮಳೆಯಲ್ಲಿ ಸಿಕ್ಕಿಕೊಂಡು, ಮಳೆ ತಗ್ಗುವವರೆಗೆ ನೆನೆಯದಂತಿರಲು, ಒಂದು ಮನೆಯ ಮೆಟ್ಟಿಲನ್ನೇರಿ ಜಗಲಿ



ಯಲ್ಲಿ ಬದಿಗೆ ಹೋದನು. ಆ ಮನೆ ಒಂದು ಕಾಲದಲ್ಲಿ ತಮ್ಮ ನೆರೆಯಲ್ಲಿ ವಾಸವಾಗಿದ್ದ ಆ ಯುವತಿಯ ಕುಟುಂಬದವರದೇ ಎಂದು ಅವನಿಗೆ ತಿಳಿಯದು.

ಆದರೆ ಮಿಂಚಿನ ಕಾಂತಿಯಲ್ಲಿ ಕಿಟಿಕಿಯಿಂದ ಅವನನ್ನು ನೋಡಿ ಗುರುತಿಸಿದ ಯುವತಿ, ಬಾಗಿಲು ತೆರೆದು ಅವನಿಗೆ ತನ್ನ ಗುರುತು ಹೇಳಿ ಒಳಗೆ ಕರೆದುಕೊಂಡು ಹೋದಳು. ಚೆನ್ನಾಗಿ ನೆನೆದು ಹೋಗಿದ್ದ ಅವನಿಗೆ ಅವಳು ಮೈ ಒರೆಸಲು ಬಟ್ಟೆ ಕೊಟ್ಟು, ಉಟ್ಟು ತೊಟ್ಟುಕೊಳ್ಳಲು ಒಣ ಬಟ್ಟೆಗಳನ್ನೂ ಕೊಟ್ಟಳು. ಆ ಸಮಯದಲ್ಲಿ ಮನೆಯೊಳಗಿದ್ದವರೆಲ್ಲ ನಿದ್ದೆ ಮಾಡಿಕೊಂಡಿದ್ದರು.

ಯುವತಿಯೂ ಯುವಕನೂ ಒಂದು ಗಂಟೆಯಷ್ಟು ಹೊತ್ತು ಮಾತಾಡಿಕೊಂಡಿದ್ದರು. ಮಾತಿನ ಸಂದರ್ಭದಲ್ಲಿ ಅವಳು ತನಗೆ ಒಬ್ಬ ಧನಿಕ ವರ್ತಕನ ಕುಮಾರನೊಂದಿಗೆ ಮದುವೆ ನಿಶ್ಚಯವಾಗಿದೆ

ಯೆಂದೂ, ತನ್ನ ಭಾವೀ ಮಾವಯ್ಯ ಈಗ ಆ ಮನೆಯಲ್ಲೇ ಇರುವರೆಂದೂ ಹೇಳಿದಳು.

ಅದನ್ನೆಲ್ಲ ಕೇಳಿ ಯುವಕ ನಕ್ಕು, 'ಇಂತಹ ರಾತ್ರಿಯ ಹೊತ್ತಿನಲ್ಲಿ ನಾನು ನಿನ್ನ ಕೋಣೆಯಲ್ಲಿ ಇದ್ದೇನೆಂದು ತಿಳಿದುಬಿಟ್ಟರೆ ಏನಾದೀತು' ಎಂದನು. ಅದಕ್ಕೆ ಉತ್ತರವಾಗಿ ಯುವತಿ ಕೂಡಾ ನಕ್ಕು, 'ನಮ್ಮವರು ಈ ಸಮಯದಲ್ಲಿ ನಿನ್ನನ್ನು ನೋಡಿ ಬಿಟ್ಟರೆ ನಾನು ಕೂಡಲೇ ಕಳ್ಳ ಕಳ್ಳ ಎಂದು ಕೂಗುತ್ತೇನೆ. ನೀನು ಕೂಡಾ ನನ್ನ ಗೌರವ ಕಾಪಾಡಲಿಕ್ಕಾಗಿ ಕಳ್ಳನೆಂದು ಒಪ್ಪಿಕೊಳ್ಳದೆ ಉಪಾಯ ವಿಲ್ಲ' ಎಂದಳು.

ಆಮೇಲೆ ಸ್ವಲ್ಪ ಹೊತ್ತಿಗೆ ಮಳೆ ತಗ್ಗಿಹೋದ ಕೂಡಲೇ ಯುವಕನು ಕೋಣೆಯಿಂದ ಹೊರಗೆ ಬಂದನು. ಅದನ್ನು ನೋಡಿದ ಸೇವಕನೊಬ್ಬ 'ಕಳ್ಳ ಕಳ್ಳ' ಎನ್ನುತ್ತಾ ಕೂಗಿದನು.

ಮನೆಯೊಳಗೆ ಮಲಗಿಕೊಂಡಿದ್ದವರೆಲ್ಲಾ ಎದ್ದು ಓಡಿಹೋಗಲು ನೋಡುತ್ತಿದ್ದ ಯುವಕನನ್ನು ಹಿಡಿದರು. ಆ ಯುವತಿಯ ತಾಯಿ ತಂದೆಯರಿಗೆ ಆ ಯುವಕನು ಯಾರೆಂದು ಗೊತ್ತಿದೆ. ಆದರೂ ತನ್ನ ಮನೆಯಲ್ಲಿರುವ ಬಾವನೆಂಟನು ತಮ್ಮ ಕುಮಾರಿಯ ಶೀಲವನ್ನು ಶಂಕಿಸಬಹುದೆಂದುಕೊಂಡು ತಿಳಿಯದವರಂತೆಯೇ ಇದ್ದುಬಿಟ್ಟರು.

ಈ ಸಮಾಚಾರವನ್ನು ಕೇಳಿದ ಅಮೀರನು ಕರ ವಸ್ತ್ರದಿಂದ ಒಮ್ಮೆ ಕಣ್ಣುಗಳನ್ನು ಒತ್ತಿಕೊಂಡು, ಅಲ್ಲಿ ಸೇರಿದ ಜನರನ್ನು ನೋಡಿ, "ಈ ಯುವಕನು ಅತ್ಯಂತ ಧೈರ್ಯಶಾಲಿಯಾಗಿದ್ದಾನೆ. ಪ್ರಾಮಾಣಿಕನೂ ಹೌದು. ಒಬ್ಬಳು ಒಳ್ಳೆಯ ಗುಣದ ಹುಡುಗಿಗೆ ಎಂತಹ ಕಳಂಕವೂ ಬರಬಾರದೆಂದುಕೊಂಡು, ತನ್ನ ಎರಡು ಕೈಗಳನ್ನೂ ಕಳೆದುಕೊಳ್ಳಲು ಸಿದ್ಧನಾಗಿದ್ದಾನೆ. ತ್ಯಾಗವೆಂದರೆ ಇದು! ನನಗೆ ಕುಮಾರಿ ಇಲ್ಲ, ಇರುತ್ತಿದ್ದರೆ ಅವಳನ್ನು ಇವನಿಗೇ ಕೊಟ್ಟು ನನ್ನ ಅಳಿಯನಾಗಿ ಮಾಡಿಕೊಳ್ಳುತ್ತಿದ್ದೆನು" ಎಂದನು.

ಮರುಕ್ಷಣದಲ್ಲಿ ಯುವತಿಯ ತಂದೆ ಜನರ ಗುಂಪಿನಿಂದ ಮುಂದೆ ಬಂದು ಅಮೀರನ ಹತ್ತಿರ ನಿಂತು ನಮಸ್ಕಾರ ಮಾಡಿ, "ಪ್ರಭೂ, ನನ್ನ ಕುಮಾರಿಯನ್ನು ಈ ಯುವಕನಿಗೇ ಕೊಟ್ಟು ವಿವಾಹ ಮಾಡಲು ಅನುಜ್ಞೆ ಕೊಡಬೇಕು. ಇವನು ಯಾರು ಎಂಬುದು ತಿಳಿದೂ ಮುಚ್ಚಿಟ್ಟುಕೊಂಡುದಕ್ಕೆ ನಾನು ಲಜ್ಜೆಪಡುತ್ತೇನೆ. ಕ್ಷಮಿಸಬೇಕು" ಎಂದನು.

ಆ ಮಾತು ಕೇಳಿ ಅಮೀರನು ಮುಗುಳ್ನಕ್ಕನು. ಜನರು ಆನಂದದಿಂದ ಕರತಾಳ ಧ್ವನಿ ಮಾಡಿದರು. ಆ ದಿನವೇ ಅಮೀರನ ಮುಂದಾಳ್ತನದಲ್ಲಿ ಆ ಯುವಕನಿಗೆ ಆ ಯುವತಿಯೊಂದಿಗೆ ಬಹು ವಿಜೃಂಭಣೆಯಿಂದ ವಿವಾಹವಾಯಿತು.



# ಸ್ಕಾಟ್‌ಲಾಂಡ್ ಕಾಡು ಬೆಕ್ಕು

ಸ್ಕಾಟ್‌ಲಾಂಡ್‌ನಲ್ಲಿರುವ ಎತ್ತರವಾದ ಗುಡ್ಡಗಳೂ, ನಿರ್ಮಾನುಷ್ಯವಾದ ಕಣಿವೆಗಳೂ, ಕಾಡು ಪ್ರಾಣಿಗಳೂ ತಮ್ಮ ಆಹಾರಕ್ಕಾಗಿ ಬೇಟೆಯಾಡುವ ಪ್ರದೇಶವನ್ನು ಕಲ್ಪಿಸುವಂಥವು. ಆದುದರಿಂದ ಬ್ರಿಟಿಷ್ ದ್ವೀಪಗಳಲ್ಲಿ ಮತ್ತೆಲ್ಲಿಯೂ ಕಾಣ ಸಿಗದ ಕಾಡು ಬೆಕ್ಕುಗಳು ಸ್ಕಾಟ್‌ಲಾಂಡ್ ಗುಡ್ಡದ ಸಾನು ಪ್ರದೇಶಗಳಲ್ಲಿ ನಿವಾಸ ಏರ್ಪಡಿಸಿಕೊಂಡಿವೆ. ಮನುಷ್ಯರ ಉಪದ್ರವಿಲ್ಲದ ಮೈದಾನಗಳು, ಏರು ತಗ್ಗುಗಳಿಂದ ತುಂಬಿದ ಗುಡ್ಡಗಳು, ನದಿಗಳು, ತೊರೆಗಳು ಇರುವ ಪ್ರದೇಶಗಳಲ್ಲಿ ಕಾಡು ಬೆಕ್ಕುಗಳು ಇರುತ್ತವೆ.

ಒಂದು ಕಾಲದಲ್ಲಿ ಬ್ರಿಟನ್ನಿನ ಎಲ್ಲಾ ಕಡೆಗಳಲ್ಲಿಯೂ ವಿಸ್ತಾರವಾಗಿ ಕಾಣಿಸಿದ ಕಾಡು ಬೆಕ್ಕುಗಳು, ಪ್ರಸ್ತುತ ಮಾನವ ಸಂಚಾರ ಹೆಚ್ಚಾಗಿ ಹೋದುದರಿಂದ ಕ್ರಮವಾಗಿ ಉತ್ತರ ಪ್ರಾಂತಗಳಿಗೆ ಹೋಗಿ ಸೇರಿಕೊಂಡುವು.

ಸಾಧಾರಣ ಬೆಕ್ಕುಗಳಿಗಿಂತ ಆಕಾರದಲ್ಲಿ ಸ್ವಲ್ಪ ದೊಡ್ಡದಾಗಿ, ಹುಲಿ ಮರಿಗಳಂತೆ ಕಾಣುವ ಕಾಡು ಬೆಕ್ಕುಗಳು ಊದಾ, ಬೂದು ಬಣ್ಣದಲ್ಲಿರುತ್ತವೆ. ಎತ್ತರವಾದ ಕಾಲುಗಳಿಂದ, ಶರೀರ ತುಂಬಿದ ದಟ್ಟವಾದ ರೋಮಗಳಿಂದ, ಚದರಾಕಾರದ ತಲೆಯಿಂದ ಕೂಡಿರುವ ಈ ಪ್ರಾಣಿಗಳು ಮುಕ್ಕಾಲು ಮೀಟರು ಉದ್ದವಾದ ಬಾಲವನ್ನೂ ಹೊಂದಿವೆ. ಬಾಲದ ಸುತ್ತಲೂ ಉಂಗುರಗಳಂತೆ ನಾಲ್ಕೈದು ಚಾರೆಗಳಿರುತ್ತವೆ.

ಇವುಗಳು ಮರದ ಪೊಟರೆಗಳಲ್ಲಿಯೂ, ಕಲ್ಲುಗಳ ಬಿಲಗಳಲ್ಲಿಯೂ ವಾಸಿಸುತ್ತವೆ. ಬಹಳ ಚುರುಕಾಗಿ ಬೇಟೆಯಾಡಿ ಆಹಾರ ಸಂಪಾದಿಸುತ್ತವೆ. ರಾತ್ರಿಯಾದರೂ, ಹಗಲಾದರೂ ಒಂಟಿಯಾಗಿಯೇ ಬೇಟೆಗೆ ಹೊರಡುತ್ತವೆ. ಮೊಲ, ಇಲಿ, ಪಾರಿವಾಳ ಮೊದಲಾದವುಗಳಿಗಾಗಿ ಸಹನೆಯಿಂದ ಕಾಯುತ್ತಲಿದ್ದು, ಒಂದೇ ಹಾರಿಕೆಗೆ ಅವುಗಳನ್ನು ಹಿಡಿಯುತ್ತವೆ. ಮಾಮೂಲು ಆಹಾರ ಸಿಗದಿದ್ದಾಗ ಇವು ನದೀ ಜಲದ ಮೀನುಗಳನ್ನು ಪಂಜಾಗಳಿಂದ ಹಿಡಿದು ತಿನ್ನುತ್ತವೆ. ಸಂವತ್ಸರಕ್ಕೆ ಒಂದುಸಾರಿ ವಸಂತ ಕಾಲದಲ್ಲಿ ಮಾತ್ರವೇ ಈನುತ್ತವೆ.

ಬಲವಾದ, ಹರಿತವಾದ ಉಗುರುಗಳಿಂದ ಯಾವಾಗಲೂ ರೌದ್ರವಾಗಿ ಕಾಣಿಸುವ ಈ ಕಾಡು ಬೆಕ್ಕುಗಳನ್ನು ಪಳಗಿಸಿ, ಸಾಕು ಪ್ರಾಣಿಗಳನ್ನಾಗಿ ಮಾಡುವುದು ಸಾಧ್ಯವಾಗದು. ಇವು ಚಿಕ್ಕ ಮರಿಗಳಾಗಿದ್ದಾಗ ಹಿಡಿದು ಬೋನುಗಳಲ್ಲಿ ಬಂಧಿಸಿ ಆಹಾರ ಕೊಡುತ್ತಿದ್ದರೂ ಆಹಾರವನ್ನು ಕೊಡುವ ಕೈಗಳನ್ನು ಪರಚುವಷ್ಟು ಕ್ರೂರ ಗುಣವುಳ್ಳವು.

ಒಂದು ಕಾಲದಲ್ಲಿ ಮನುಷ್ಯರು ಇವುಗಳನ್ನು ಬೇಟೆಯಾಡಿ ಕೊಲ್ಲುತ್ತಿದ್ದರು. ಈಗ ಇವುಗಳ ಸಂತತಿ ನಶಿಸುವ ಸ್ಥಿತಿಗೆ ಬಂದಿದೆ. ಆದುದರಿಂದ ಇವುಗಳ ತಂಟೆಗೆ ಯಾರೂ ಹೋಗುವುದಿಲ್ಲ. ಅಲ್ಲದೆ ಕಾಡು ಬೆಕ್ಕುಗಳು ಮರಗಳನ್ನು ನಾಶಪಡಿಸುವ ಅಳಿಲಿನಂತಹ ಜಂತುಗಳ ಸಂಖ್ಯಾಭಿವೃದ್ಧಿಯನ್ನು ಹದ್ದಿನಲ್ಲಿಟ್ಟುಕೊಳ್ಳುತ್ತವೆ.





## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೩ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



A. V. Rangaiah



M. C. Morabad

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಫೆಬ್ರುವರಿ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್. ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಡಿಸೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಮನೆ ಬೆಳಗಿಸುವವಳು

ಎರಡನೇ ಫೋಟೋ : ಮನದಲ್ಲಿ ಉಳಿಸಿಕೊಳ್ಳಲು

ಕಳುಹಿಸಿದವರು : ಎಂ. ಎಸ್. ಜಯಲಕ್ಷ್ಮಿ, ೪೭೩/೨, ೧ನೇ ಹಂತ, ಮೈಸೂರು-೮

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ? ಉತ್ತರಗಳು :

೧. ಮಲಗಾಸೀ (ಮಡಗಾಸ್ಕರ್); ೨. ಚಿಲೀ; ೩. ಟ್ರಿಸ್ಟಾನ್ ಡಾ. ಕುನ್ಹಾ; ೪. ಮುನ್ನೂರಕ್ಕೂ ಮೇಲೆ; ೫. ೭,೧೦೭ ದ್ವೀಪಗಳು.

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.

ದಂತಕುಳಿಗಳನ್ನು

# ಸೂಪರ್ ಫೈಟರ್

ಹೊಡೆದೋಡಿಸಲು

ಬೇಕಾಗುತ್ತದೆ.



















ಮತ್ತು ಫೋರ್‌ಹೆನ್ಸ್ ಫ್ಲೋರೈಡ್
ಆ ಸುಪ್ರಸಿದ್ಧ ಫೋರ್‌ಹೆನ್ಸ್
ರಕ್ಷಣೆಯನ್ನೂ ನೀಡುತ್ತದೆ.




ಫೋರ್‌ಹೆನ್ಸ್ ಫ್ಲೋರೈಡ್ - ಒಸಡುಗಳನ್ನು ಗಟ್ಟಿಗೊಳಿಸುತ್ತದೆ. ದಂತಕುಳಿಗಳನ್ನು ಹೊಡೆದೋಡಿಸುತ್ತದೆ.

404 GM-183 KAN

# ಹೊಸದರಂತಹ ಬಿಳುಪು!



ಒಗೆತದ ಮೇಲೆ ಒಗೆತ...ಪ್ರತಿ ಸಲ! ಪವರ್ ಪ್ಯಾಕ್ಡ್ ಸರ್ಫ್ ಬಟ್ಟೆಗಳನ್ನು ಹೊಸದರಂತೆ ಬೆಳ್ಳಗೆ ಒಗೆಯುತ್ತದೆ!

ಪ್ರತಿಯೊಂದು ಶರ್ಟ್, ಪ್ರತಿಯೊಂದು ಶೀಟ್ ಸ್ವಚ್ಛವಾಗಿ, ಸೊಗಸಾಗಿ ಬಿಳಿಬಿಳಿಯಾಗಿರುತ್ತದೆ—ನೀವು ಅದನ್ನು ಕೊಂಡುಕೊಂಡು ಮನೆಗೆ ತಂದಾಗ ಇದ್ದಷ್ಟು.

ಕಾರಣ? ಪವರ್ ಪ್ಯಾಕ್ಡ್ ಸರ್ಫ್ ಮೊದಲಿಗಿಂತ ಎಷ್ಟೋ ಹೆಚ್ಚು ಉತ್ತಮವಿದೆ, ಮೊದಲಿಗಿಂತ ಹೆಚ್ಚು ಸಮೃದ್ಧವಾದ ನೊರೆಯುಳ್ಳದ್ದಾಗಿದೆ.

ಸರ್ಫ್ ಸುಲಭವಾಗಿ ಹೋಗದ ಕೊಳೆಯನ್ನು ಕೂಡ ತೆಗೆಯುವಷ್ಟು ಹೆಚ್ಚು ಶಕ್ತಿಶಾಲಿ, ನಿಮ್ಮ ಬಟ್ಟೆಗಳ ಹೊಸತನವನ್ನು ಹೆಚ್ಚು ಸಮಯ ಉಳಿಸುವಷ್ಟು ಹೆಚ್ಚು ದಕ್ಷತಾಶೀಲ.

ಹೌದು, ನಿಮ್ಮ ಬಿಳಿ ಬಟ್ಟೆಗಳನ್ನೂ, ಬಣ್ಣದ ಬಟ್ಟೆಗಳನ್ನೂ, ವಿಶೇಷ ಹಾಗೂ ನಿತ್ಯಬಳಕೆಯ ಬಟ್ಟೆಗಳನ್ನೂ ಚೆನ್ನಾಗಿ, ಹೊಸದರಂತೆ ಇಡಲು ಒಂದೇ ಒಂದು ಪೌಡರ್ ಇದೆ... ಸರ್ಫ್.






**ಸರ್ಫ್ ಎಲ್ಲಕ್ಕಿಂತ ಬೆಳ್ಳಗೆ ಒಗೆಯುತ್ತದೆ... ನಿಮ್ಮ ಎಲ್ಲ ಬಟ್ಟೆಗಳನ್ನು ಹೊಸದರಂತಿಡುತ್ತದೆ.**

ಹಿಂದುಸ್ತಾನ್ ಲೀವರ್ ಅವರ ಉತ್ಕೃಷ್ಟ ಉತ್ಪಾದನೆ.

LINTAS SU 331 2116 KN